ಶಾರದೆಯ ಮುತ್ತಿನ ಸರ

(೪)

# ವೇಣುಪುರಿಯ ವರ್ತ

ಮಹಾಕವಿಯಾದ ಶೇಕ್ಸಪಿಯರನ " The Merchaut of
" ಎಂಬ ಆಂಗ್ಲನಾಟಕದ ರೂಪಾಂತರವು.]

ಇದನ್ನು

ಕರ್ಣಾಟಕ ನಾಟಕಭೂಷಣ ಬಿರುದಾಂಕಿತರಾದ

**ರಾವಬಹಾದ್ದೂರ ಚಿ. ಹನುಮಂತಗೌಡರು, ಹೊಸಪೇಟೆ**

ಇವರು ಬರೆದರು;

ಮತ್ತು

**ಪಂಡಿತ ಭೀ. ಜೀ. ಹುಲಿಕವಿ,** ಎಸ್. ಟೀ. ಸೀ.

ಸಂಪಾದಕ '**ಶಾರದೆ**' ಶಾರದಾಮಂದಿರ, ಧಾರವಾಡ

ಇವರು ತಕ್ಕ ಮಾರ್ಪಾಡುಗಳೊಂದಿಗೆ ಪರಿಶೋಧಿಸಿ ಪ್ರಕಟಿಸಿದರು.





—: ಮುದ್ರಕರು :—

**ಶ್ರೀ. ಮಾಧವ ಕೃಷ್ಣ ಜೋಶಿ**

ಕರ್ನಾಟಕ ಪ್ರಿಂಟಿಂಗ ವರ್ಕ್ಸ, ಧಾರವಾಡ

ವಿಭವ (೧೮೫೦)— ಪೌಷ್ಯ-ಮಾಘ

**ಬೆಲೆ ೦—೮—೦**

# ಪಾತ್ರಗಳು



## ಮುಖ್ಯರಾದ ಗಂಡಸರು

**ರಾಜ:**— ವೇಣುಪುರಿಯ ಅರಸು.

**ಆಂಧ್ರರಾಜಕುಮಾರ**
**ತಮಿಳು ರಾಜಕುಮಾರ** } ಪ್ರಭಾವತಿಯ ಪ್ರೇಮಕಾಂಕ್ಷಿಗಳು.

**ಅನಂತಶ್ರೇಷ್ಠಿ:**— ವೇಣುಪುರಿಯ ವರ್ತಕ

**ವಸಂತಕುಮಾರ:** — ಅನಂತಶ್ರೇಷ್ಠಿಯ ಗೆಳೆಯು; ಉಂಬಳಿಗಾರ; ಮತ್ತು ಪ್ರಭಾವತಿಯ ಪರಿಣಯನೇಚ್ಛು.

**ಶಿಲಾದಿತ್ಯ:**— ಅನಂತಶ್ರೇಷ್ಠಿ ಮತ್ತು ವಸಂತಕುಮಾರ ಇವರ ಗೆಳೆಯು.

**ಗುರುಪ್ರಸಾದ:**— ಅನಂತ ಶ್ರೇಷ್ಠಿಯ ಗೆಳೆಯು; ವಸಂತಕುಮಾರನ ದಿವಾನ; ಶೂಲಕ್‌ಚಂದನ ವಿಲೇಖಕ; ಶಶಿಕಲೆಯ ಪ್ರೇಮಾಸ್ಪದ.

**ಶೂಲಕ್‌ಚಂದ:**— ಕೃಪಣನೂ ಶ್ರೀಮಂತನೂ ಆದ ಮಾರವಾಡಿ; ಶಶಿಕಲೆಯ ತಂದೆ.

**ಶೋಡರಮಲ್ಲ:**— ಶೂಲಕ್‌ಚಂದನ ಗೆಳೆಯನಾದ ಮಾರವಾಡಿ.

## ಮುಖ್ಯರಾದ ಹೆಂಗಸರು

**ಪ್ರಭಾವತಿ:**— ಸೌರಾಷ್ಟ್ರಪುರಿಯ ಶ್ರೀಮತ್ಕನ್ಯೆ; ಪುರುಷವೇಷದಲ್ಲಿ ನ್ಯಾಯವಾದಿ ವಿಜಯೀಂದ್ರಕುಮಾರ.

**ನರ್ಮದೆ:**— ಪ್ರಭಾವತಿಯ ದಾಸಿ.

**ಶಶಿಕಲೆ:**— ಶೂಲಕ್‌ಚಂದನ ಮಗಳು; ಗುರುಪ್ರಸಾದನ ಪ್ರಣಯಿನಿ; ಪುರುಷವೇಷದಲ್ಲಿ ವಿಜಯೀಂದ್ರಕುಮಾರನ ವಿಲೇಖಕ.

## ಇತರರು

ಅರಸನ ಸಭಾಸದರು, ಪ್ರೇಕ್ಷಕರು, ಆರಕ್ಷಕಭಟರು, ಮತ್ತು ಸೇವಕರು.

## ಸ್ಥಳಗಳು

**ವೇಣುಪುರಿ** ಮತ್ತು **ಸೌರಾಷ್ಟ್ರಪುರಿ.**



# ಪ್ರಸ್ತಾವನೆ

ನಮ್ಮ ಪರಮಮಿತ್ರರಾದ ರಾವಬಹಾದ್ದೂರ ಚಿ. ಹನುಮಂತಗೌಡರು ಸಾಲೆಯೊಳಗಿನ ವಿದ್ಯಾರ್ಥಿಗಳ ಅಭಿನಯಕ್ಕೆ ಅನುಕೂಲವಾಗುವಂತೆ ಮೊದಲು ಈ ನಾಟಕವನ್ನು ಬರೆದಿದ್ದರು. ಅದು ಪ್ರಕಟನಕ್ಕಾಗಿ ನಮ್ಮ ಕಡೆಗೆ ಬಂದೊಡನೆಯೇ ಮೂಲದೊಡನೆ ಓದಿ ನೋಡಲು, ಕಥಾನುಸಂಧಾನ ಮತ್ತು ರಸಪರಿಪೋಷ ಈ ದೃಷ್ಟಿಯಿಂದ ಹಲಕೆಲವು ಮಾರ್ಪಾಡುಗಳನ್ನು ಮಾಡುವದು ಅವಶ್ಯವೆಂದು ತೋರಿತು. ಇಂತಹ ಮಾತುಗಳ ಊಹಾಪೋಹೆಗೆ ಪತ್ರವ್ಯವಹಾರಕ್ಕಿಂತ ಪ್ರತ್ಯಕ್ಷಚರ್ಚೆಯೇ ನೆಟ್ಟಗೆಂಬ ರಾವಬಹಾದ್ದೂರರವರ ಮತವನ್ನು ಅನುಸರಿಸಿ, ಅವರಂತೆಯೇ ಆಯಾವಿಷಯಗಳನ್ನು ನಿರ್ಧರಿಸಿದೆವು. ಹೀಗೆ ಭಾಷೆ ಮತ್ತು ಕಥಾವಸ್ತು ಇವುಗಳನ್ನು ಸರಿಪಡಿಸಿಕೊಂಡು ಪ್ರಸ್ತುತನಾಟಕವನ್ನು ನಮ್ಮ ವಾಚಕಮಹಾಶಯರಿಗೆ ಆದರಪೂರ್ವಕವಾಗಿ ಅರ್ಪಿಸಿದ್ದೇವೆ. ರಾವಬಹಾದ್ದೂರರವರು ಮದ್ರಾಸಪ್ರಾಂತದಲ್ಲಿ ರಾಜಪ್ರಜಾಮಾನ್ಯರಾದ ಒಬ್ಬ ದೊಡ್ಡ ಸದ್ಗೃಹಸ್ಥರು. ತೆಲಗು ಮತ್ತು ಕನ್ನಡ ಇವೆರಡು ಮಾತುಗಳಲ್ಲಿಯೂ ಅನೇಕ ನಾಟಕಗಳನ್ನು ರಚಿಸಿದವರು. ಕನ್ನಡನಾಡಿನ ವಿದ್ವನ್ಮಣಿಗಳೆಲ್ಲ ಏಕಕಂಠದಿಂದ ಇವರಿಗೆ ' ಕರ್ಣಾಟಕ ನಾಟಕಭೂಷಣ ' ಎಂಬ ಬಹುಮಾನಸೂಚಕವಾದ ಪದವಿಯನ್ನು ಕೊಟ್ಟಿದ್ದಾರೆ. ಇವರು ಬರೆದ ಕೆಲವು ನಾಟಕಗಳು ಮದ್ರಾಸ ಪ್ರಾಂತದ ವಿದ್ಯಾವಿಭಾಗದವರಿಂದಲೂ ವಿಶ್ವವಿದ್ಯಾಲಯದವರಿಂದಲೂ ಪಠ್ಯಪುಸ್ತಕಗಳೆಂದು ಅಂಗೀಕೃತವಾಗಿವೆ. ಇಂತಹ ಮಹನೀಯರು ಉದಾರಬುದ್ಧಿಯಿಂದ ಪ್ರಸ್ತುತಪುಸ್ತಕವನ್ನು ಶಾರದೆಗೆ ಅರ್ಪಿಸಿದ್ದಕ್ಕಾಗಿ ಸಂತೋಷಿಸುತ್ತೇವೆ. ಇದರಂತೆಯೇ ಇನ್ನು ಮುಂದೆ ರಾವಬಹಾದ್ದೂರರವರ ಉಜ್ವಲತರವಾದ ಗ್ರಂಥಗಳು ಶಾರದೆಯಲ್ಲಿ ಯಥಾವಕಾಶವಾಗಿ ಪ್ರಕಟಿಸಲ್ಪಡುವವು. ಇರಲಿ.

ಕವಿಸಾರ್ವಭೌಮನೆನಿಸಿದ ಶೇಕ್ಸಪಿಯರ ಮಹಾಕವಿಯಿಂದ ಪ್ರಣೀತವಾದ Merchant of Venice ( ಮರ್ಚಂಟ್ ಆಫ್ ವೆನಿಸ್ ) ಎಂಬ ನಾಟಕದ ಆಧಾರದಿಂದ ಇದು ಬರೆಯಲ್ಪಟ್ಟಿದೆ. ಆದರೆ ಇದು ಮೂಲ ನಾಟಕದ ಭಾಷಾಂತರವಾಗಲಿ, ಆ ನಾಟಕದಲ್ಲಿದ್ದ ಪಾತ್ರಪೋಷಣೆಯನ್ನು ಅನುಸರಿಸಿ ಬರೆದದ್ದಾಗಲಿ ಅಲ್ಲ. ಮೂಲದಲ್ಲಿ ಸೂಚಿತವಾದ ಮುಖ್ಯಾಂಗಗಳ ಕಥಾಸರಣಿಯನ್ನು ಮಾತ್ರ ಇದರಲ್ಲಿ ತೆಗೆದುಕೊಂಡಿದೆ. ಮೂಲದಲ್ಲಿರುವ ಅರ್ಥಗರ್ಭಿತವಾದ ಮತ್ತು

ಶ್ರೀ

ರಸಭರಿತವಾದ ಎಷ್ಟೋ ವಾಕ್ಯಗಳು ಉಪ್ಪವಾಗಿಯೂ ಗಡುಚಾಗಿಯೂ ಇಪ್ಪ ದರಿಂದ ಅಂತಹವನ್ನು ಇದರಲ್ಲಿ ಬಿಟ್ಟುಬಿಟ್ಟಿದೆ. ಪಾಶ್ಚಾತ್ಯರ ನಾಗರಿಕತೆಗೂ ನಮ್ಮ ನಾಗರಿಕತೆಗೂ ವಿಶೇಷತಾರತಮ್ಯವುಂಟು. ಅವರ ಮತಾಚಾರದ ರಾಗ ದ್ವೇಷಗಳು, ವಿವಾಹಸಂಬಂಧದ ಆಚರಣೆಗಳು, ತಿನ್ನುವ ಪದಾರ್ಥಗಳು, ಮತ್ತು ರೀತಿವಿಶೇಷಗಳು ಇವೇ ಮೊದಲಾದ ಸಂಗತಿಗಳನ್ನು ಇದ್ದಕ್ಕಿ ದ್ದಂತೆ ಪರಿವರ್ತಿಸುವದು ಎಂದೂ ಸಮಂಜಸವೆನಿಸದು. ಆದದರಿಂದಾಗಿ ಮೂಲ ದೊಳಗಿನ ಜಸಿಕೆ (ಶಶಿಕಲೆ)ಯ ಪಾತ್ರವನ್ನು ತೆಗೆದುಕೊಳ್ಳುವ. ಇವಳು ತನ್ನ ಪಿತನ ಧನವನ್ನು ಅಪಹರಿಸಿಕೊಂಡು ಅನ್ಯಮತೀಯನಾದ ಲೋರೆಂಝೋವಿನ ಜೆನ್ನು ಹತ್ತಿ ಓಡಿಹೋಗಿ, ಅವನನ್ನು ಮದುವೆ ಮಾಡಿಕೊಂಡು ತನ್ನ ಮತಾಚಾ ರಕ್ಕೆ ಅತಿಹೇಯವಾದ ರೀತಿಯಲ್ಲಿ ವಿನೋದಗೋಷ್ಠಿಯನ್ನಾಡುವ ವಿಷಯವು ನಮಗೆ ಎಷ್ಟು ಬೀಭತ್ಸವಾಗಬಹುದೆಂಬವನ್ನು ಬೇರೆ ಹೇಳಬೇಕೇ ? ಆದದರಿಂದ ಅನಾವಶ್ಯಕವೆಂದು ತೋರಿದ ವಿಷಯಗಳನ್ನೆಲ್ಲ ಇದರಲ್ಲಿ ಬಿಟ್ಟುಬಿಟ್ಟಿದೆ; ಮತ್ತು ಆವಶ್ಯಕವೆಂದು ತೋರಿದಂತೆ ಮಾರ್ಪಾಡುಗಳನ್ನು ಮಾಡಿದೆ.

ಈ ನಾಟಕದ ಮೂಲಕಥೆಯು ಬೇರೆ ಬೇರೆಯಾದ ನಾಲ್ಕು ಕಥೆಗಳಿಂದ ಕ್ರೋಡೀಕರಿಸಲ್ಪಟ್ಟಿದೆಯೆಂದು ಅನೇಕವಿಮರ್ಶಕಾರರು ಹೇಳುತ್ತಾರೆ. ಆದರೆ ಮುಖ್ಯನಾಯಿಕಾನಾಯಕರಾದ ಪ್ರಭಾವತೀವಸಂತಕುಮಾರರ ಪರಿಣಯಕ್ಕೆ ಸಂಬಂಧಿಸಿದ ಸಂಗತಿಗಳನ್ನು ಮಾತ್ರ ಇದರಲ್ಲಿ ಮುಖ್ಯವಾಗಿ ಆರಿಸಿದೆ; ಮತ್ತು ಪ್ರಭಾವತಿಯ ಬುದ್ಧಿಕೌಶಲ್ಯ, ಪಿತೃವಾಕ್ಯಪರಿಪಾಲನನಿಷ್ಠತೆ, ಉದಾರಗುಣ, ವಿಶುದ್ಧಪ್ರೇಮ ಮುಂತಾದ ವಿಷಯಗಳನ್ನು ವ್ಯಕ್ತಬಡಿಸುವ ಸಂವಿಧಾನಕಗಳು ತತ್ಪೋಷಕವಾದ ಹೊಸ ಮಾರ್ಪಾಡುಗಳೊಂದಿಗೆ ಇದರಲ್ಲಿ ಗರ್ಭಿತವಾಗಿವೆ.

ಕ್ರಿಸ್ತಮತಾವಲಂಬಿಗಳಿಗೂ ಯಹೂದೀಯರಿಗೂ ಇರುವ ಮತದ್ವೇಷ ವನ್ನು ವ್ಯಕ್ತಬಡಿಸುವದೇ ಮೂಲದೊಳಗಿನ ಜಸಿಕಾ—ಲೋರೆಂಝೋ ಇವರ ವಿವಾ ಹಪ್ರಸಂಗದ ಉದ್ದೇಶವು. ಅದು ಇದ್ದಕ್ಕಿದ್ದಂತೆಯೇ ನಮ್ಮ ಸಮಾಜಕ್ಕೆ ಯಾವ ತರದಿಂದಲೂ ಬೋಧಪ್ರದವಾಗಲಾರದು. ಆದುದರಿಂದ ವಸಂತಕುಮಾರನ ಮಿತ್ರ ನಾದ ಗುರುಪ್ರಸಾದನನ್ನು ಶೂಲಕ್‌ಚಂದನ ತಾತ್ಕಾಲಿಕವಿಲೇಖಕನನ್ನಾಗೆ ಮಾಡಿ, ಅವನಲ್ಲಿರುವ ಸದ್ಗುಣಗಳಿಗೆ ಮುಗ್ಧಳಾದ ಶಶಿಕಲೆಯು ಅವನನ್ನು ಮದುವೆಯಾ ದಂತೆ ತೋರಿಸಿದೆ! ಅದರಲ್ಲಿಯೂ ಪ್ರಕೃತ ಕಾಲದಲ್ಲಿ ನಮ್ಮ ಸಮಾಜದಲ್ಲಿ ರೂಢ ವಾಗುತ್ತ ನಡಿದಿದ್ದ ಶುದ್ಧಿ—ಸಂಘಟನದ ಕ್ರಮವನ್ನು ಅಲ್ಲಿ ಕಲ್ಪಿಸಿದ್ದು ಹೆಚ್ಚು

ಚಿತ್ತಾಕರ್ಷಕವೂ ಪ್ರಕೃತಕಾಲೋಚಿತವೂ ಆಗಿದೆಯೆಂದು ಹೇಳಬಹುದು. ಇನ್ನು ಮೂಲಕ್ಕೆ ಅತ್ಯಂತವಿರುದ್ಧವಾಗಿ ಶಶಿಕಲೆಯು ತನ್ನ ಉಟ್ಟ ಬಟ್ಟೆಯನ್ನಲ್ಲದೆ ಇನ್ನೇನನ್ನೂ ತಂದೆಯ ಮನೆಯಿಂದ ತೆಗೆದುಕೊಳ್ಳದೆ ತನ್ನ ಪ್ರಿಯನನ್ನು ಹಿಂಬಾಲಿಸಿದ್ದು ಹೆಚ್ಚು ಉದಾತ್ತವೂ ಪವಿತ್ರವೂ ಉದ್ಬೋಧಕವೂ ಆಗಿದೆ. ಮುಂದೆ ಇದೇ ಶಶಿಕಲೆಯು ಪ್ರಭಾವತಿಯೊಡನೆ ಪುರುಷವೇಷದಿಂದ ಬಂದು ಪತಿಯ ಮಿತ್ರನ ಮಿತ್ರನಾದ ಅನಂತಶ್ರೇಷ್ಠಿಯನ್ನು ಉಳಿಸುವದಕ್ಕೆ ನೆರವಾದ ಸಂಗತಿಯು ಅವಳ ಉತ್ತಮತ್ವವನ್ನು ಇನ್ನೂ ಹೆಚ್ಚಿಸಿದೆ.

ಮೂಲದಲ್ಲಿಯ ಗೋಬೋ ಮತ್ತು ಓಲ್ಡ ಗೋಬೋ ಇವರಿಂದ ನಮ್ಮ ಮುಖ್ಯಕಥಾಭಾಗದ ಪೋಷಣೆಗೆ ವಿಶೇಷಸಾಹಾಯ್ಯವಿಲ್ಲವಾದುದರಿಂದಲೂ, ಮುಪ್ಪಿನ ತಂದೆ ಮತ್ತು ತುಂಟ ಮಗ ಇವರ ಸಂಭಾಷಣವು ಎಷ್ಟೇ ಮನೋರಂಜಕವಿದ್ದರೂ ಅವಶ್ಯಪ್ರದರ್ಶನೀಯವಲ್ಲವಾದುದರಿಂದಲೂ, ಬಿಟ್ಟುಬಿಡುವದರಿಂದ ನಮ್ಮ ಕಥಾಸರಣಿಗೆ ಯಾವ ಲೋಪವೂ ಇಲ್ಲವಾದದರಿಂದಲೂ ಅವರ ಸಂದರ್ಭವನ್ನು ಸಂಪೂರ್ಣವಾಗಿ ಬಿಟ್ಟುಬಿಟ್ಟಿದ್ದೇವೆ. ಅದರಂತೆಯೇ ನರಿಸಾ ಇವಳ ವಿವಾಹದ ಸಂದರ್ಭವು ಅನಾವಶ್ಯಕವಾದದರಿಂದ ಪರಿತ್ಯಜಿಸಿದ್ದೇವೆ. ಕ್ರಿಸ್ತಮತೀಯನಾದ ಶೇಕ್ಸಪಿಯರ ಮಹಾಕವಿಯು ಆತ್ಮೀಯರ ಸಂತೋಷಾರ್ಥವಾಗಿಯೂ ಯಹೂದಿಯರ ನಿರಸನಾರ್ಥವಾಗಿಯೂ ಈ ಪಾತ್ರಗಳಿಗೆಲ್ಲ ಮಹತ್ವವನ್ನು ಕೊಟ್ಟಿದ್ದಾನೆ. ಆದದರಿಂದ ನಮ್ಮ ಭಾರತೀಯರ ಆಚಾರ ವ್ಯವಹಾರಗಳನ್ನು ಅನುಸರಿಸಿ ಬರೆದ ಪ್ರಸ್ತುತ ನಾಟಕಕ್ಕೆ ಇವರ ಮಹತ್ವವು ಅಷ್ಟು ಪ್ರಬಲವಾಗಿ ತೋರುವದಿಲ್ಲ.

ಇನ್ನು ಮೂಲದಲ್ಲಿಯ ಶಾಯಲಾಕನ ಕೊನೆಯು ಸಂದಿಗ್ಧವಾಗಿದೆ. ಅಪಹಾಸ್ಯಕರವೂ ಅತಿಹೇಯವೂ ಆದ ಪಾತ್ರವನ್ನು ಕಲ್ಪಿಸಿ ಬೇಕೆಂತಲೇ ಅದನ್ನು ಆ ಸಂದಿಗ್ಧಸ್ಥಿತಿಯಲ್ಲಿ ಶೇಕ್ಸಪಿಯರ ಮಹಾಕವಿಯು ಕೈಬಿಟ್ಟದ್ದು ಸ್ಪಷ್ಟವಾಗಿದೆ. ಇದು ನಮ್ಮ ಭಾರತೀಯಮನೋರಚನೆಗೆ ಆಪ್ಯಾಯಮಾನವಾಗಿಲ್ಲ. ಆದದರಿಂದ ನ್ಯಾಯವಿಮರ್ಶಕನ ವೇಷದಲ್ಲಿದ್ದ ಪ್ರಭಾವತಿಯು ಚಾತುರ್ಯದಿಂದ ಶೂಲಕ್‍ಚಂದನು ಅಪರಾಧಿಯೆಂದೂ ದಂಡನಾರ್ಹನೆಂದೂ ಸಿದ್ಧವಾದ ಕೂಡಲೆ, ಪರಿಸ್ಥಿತಿಯ ಇರುಕಿನಲ್ಲಿ ಬಿದ್ದ ಅವನಲ್ಲಿ ಸಂಪೂರ್ಣ ಪಶ್ಚಾತ್ತಾಪವು ಹುಟ್ಟುವಂತೆ ಮಾಡಿ, ಅವನ ಮಗಳ ವಿಷಯದಲ್ಲಿಯ ವಾತ್ಸಲ್ಯವು ಉಕ್ಕೇರುವ ಸಂದರ್ಭವನ್ನುಂಟುಮಾಡಿದೆ. ಆ ಪಶ್ಚಾತ್ತಾಪದಗ್ಧವಾದ ಮನಃಸ್ಥಿತಿಯಲ್ಲಿ ಅವನು

ತನ್ನ ಮಗಳನ್ನೂ ಅಳಿಯುನನ್ನೂ ಕ್ಷಮಿಸುವದಕ್ಕೂ ಆಶೀರ್ವದಿಸುವದಕ್ಕೂ ಸಿದ್ಧನಾಗುತ್ತಾನೆ; ಮತ್ತು ಸದಾಚಾರದಿಂದಲೇ ಆಯುಷ್ಯಕ್ರಮಣವನ್ನು ಮಾಡು ವದಕ್ಕೆ ಪ್ರತಿಜ್ಞಾಬದ್ಧನಾಗುತ್ತಾನೆ ಇಂತು ಪ್ರಸಂಗಯೋಗ್ಯವಾಗಿ ಉದ್ಭೂತ ವಾದ ಅವನ ಸತ್ಪ್ರವೃತ್ತಿಗೆ, ಕೊನೆಯ ಅಂಕದಲ್ಲಿ ತನ್ನ ಮಗಳೂ ಪ್ರಭಾವತಿಯೂ ಕೂಡಿಯೇ ಪುರುಷವೇಷದಿಂದ ನ್ಯಾಯಾಸ್ಥಾನಕ್ಕೆ ಬಂದು ನ್ಯಾಯಪ್ರತಿಪಾದನ ವನ್ನು ಮಾಡಿದರೆಂಬದನ್ನು ಕೇಳುವದರಿಂದಂತೂ ಮಹಾಪೂರವು ಬಂದಂತಾಗು ತ್ತದೆ. ಇಂತು ಪಶ್ಚಾತ್ತಾಪದಗ್ಧಹೃದಯನೂ, ಅದರಿಂದಲೇ ಸದಾಚಾರದಲ್ಲಿಯೂ ದೇವಭಕ್ತಿಯಲ್ಲಿಯೂ ಅಂತ್ಯಂತನಿಷ್ಠನೂ ಆದ ಶೂಲಕ್‌ಚಂದನು ವಸಂತ ಕುಮಾರಾದಿಸರ್ವರೊಡನೆ ಸ್ನೇಹಭಾವವನ್ನು ದೃಢೀಕರಿಸಿಕೊಳ್ಳುವದಲ್ಲದೆ, ಮಗಳನ್ನೂ ಅಳಿಯನನ್ನೂ ಹಾಡಿ ಹರಿಸಿ ಕುಣಿಯ ಹತ್ತುವನು. ಹೀಗೆ ಪ್ರಭಾ ವತಿಯ ವಿವಾಹಸಮಯದಲ್ಲಿ ಅಕಸ್ಮಾತ್ತಾಗಿ ವಸಂತಕುಮಾರನ ಜೀವದ ಗೆಳೆಯನಾದ ಅನಂತಶ್ರೇಷ್ಠಿಗೊದಗಿದ ಅನಾಹುತವು ಅನಾಯಾಸವಾಗಿ ಪರಿಹೃತ ವಾದದ್ದಲ್ಲದೆ, ಸರ್ವರೂ ಸನ್ಮಿತ್ರರೂ ಸರ್ವವಿಧದಿಂದಲೂ ಸಂತೋಷನಿರ್ಭ ರರೂ ಆಗುತ್ತಾರೆ. ಈ ಪ್ರಕಾರವಾಗಿ ಪ್ರಸ್ತುತದ ರೂಪಾಂತದಲ್ಲ " All is well that ends well. " ಎಂಬ ಕವಿಸಾರ್ವಭೌಮನ ವಚನದಂತೆ ಸರ್ವವೂ ಸಂತೋಷಮಯವಾಗುವಂತೆ ಯಥಾಶಕ್ತಿ ಯತ್ನಮಾಡಿದೆ.

ಮೂಲನಾಟಕದಲ್ಲಿರುವ ವೆನಿಸ್ ಪಟ್ಟಣಕ್ಕೆ ಇಲ್ಲಿ ವೇಣುಪುರಿ ಎಂದು ಹೆಸರಿಟ್ಟಿದೆ. ಆದರೆ ಮೂಲನಾಮಧೇಯವನ್ನು ಕೇಳಿದೊಡನೆಯೇ ಆ ನಗರದ ಸ್ಥಿತಿಗತಿಯ ಕಲ್ಪನೆಯು ಕಣ್ಣಮುಂದೆ ಕಟ್ಟುತ್ತದೆ. ವೆನಿಸದಂತೆ ವ್ಯಾಪಾರೋ ದ್ಯೋಗಗಳಲ್ಲಿ ಹೆಸರಾಗಿದ್ದುದು ನಮ್ಮಲ್ಲಿ ಸೌರಾಷ್ಟ್ರಪುರಿಯು. ಇದರ ಸಮೀಪ ದಲ್ಲಿದ್ದ ಒಂದು ಭಾಗವೇ ವೇಣುಪುರಿಯೆಂದು ಭಾಸವಾಗುವಂತೆ ಎರಡೂ ಹೆಸರು ಗಳನ್ನಿಲ್ಲಿ ಉಪಯೋಗಿಸಿದೆ. ಕಲ್ಪಿತನಾಮಧೇಯದ ವೇಣುಪುರಿಯು ನಿಜವಾದ ಸೌರಾಷ್ಟ್ರಪುರಿಯ ಹೆಸರಿನೊಂದಿಗೆ ಬೆರೆತು ನಿಶ್ಚಯತ್ವವನ್ನು ಪಡೆಯಬಹುದು.

'ಶಾರದೆ'ಯ ಧ್ಯೇಯಕ್ಕನುಸರಿಸಿ **'नानपेक्षितमुच्यते'** ಎಂಬಂತೆ ಮೂಲ ಕಥೆಯನ್ನೇ ಸಂಕ್ಷೇಪಿಸಿರುವಾಗ ಪ್ರಸ್ತಾವನೆಯನ್ನು ಬೆಳೆಸಲು ನಾವು ಇಚ್ಛಿಸುವ ದೆಂತು ? ಅದರಿಂದ 'ಶಾರದೆ'ಯ ಎಲ್ಲರು ಹಿತಚಿಂತಕರಿಗೂ ಆಯುರಾರೋ ಗ್ಯೈಶ್ವರ್ಯಗಳನ್ನು ದಯಪಾಲಿಸೆಂದು ದಯಾಘನನಾದ ಪರಮಾತ್ಮನನ್ನು ಪರಿ ಪರಿಯಿಂದ ಬೇಡಿಕೊಂಡು ಇಲ್ಲಿಗೆ ನಿಲ್ಲುವೆನು. — ಸಂಪಾದಕ

# ವೇಣುಪುರಿಯ ವರ್ತಕ

## ಮೊದಲನೆಯ ಅಂಕವು



### ೧ನೆಯ ರಂಗ—ವೇಣುಪುರಿಯ ರಾಜವೀಥಿ

( ಅನಂತಶ್ರೇಷ್ಠಿಯೂ ಶಿಲಾದಿತ್ಯನೂ ಬರುತ್ತಾರೆ )

**ಅನಂತ**:— ಮಿತ್ರಾ, ಶಿಲಾದಿತ್ಯಾ, ಏನುಕಾರಣವೋ ಅರಿಯೆನು. ನನ್ನ ಮನಸ್ಸು ಬಹುಪರಿಯಾಗಿ ತಲ್ಲಣಿಸುತ್ತಿರುವದು.

**ಶಿಲಾ**:— ವಯಸ್ಯಾ ! ಇದರಲ್ಲಿ ಅರಿಯುವದೇನಿದೆ ? ನಿನ್ನ ಮನಸ್ಸು ಸಮುದ್ರದ ತೆರೆಗಳ ಮೇಲೆ ತೇಲಾಡುತ್ತಿರುವ ನಿನ್ನ ಹಡಗಗಳ ಸಂಗಡಲೇ ಹೊಯ್ದಾಡುತ್ತಲೇ ಇರುವದು. ವ್ಯಾಪಾರಮಾಡುವ ವರ್ತಕರ ಗತಿಯೆಲ್ಲವೂ ಇಷ್ಟೇಸರಿ ! ಅವರ ಹೊಟ್ಟೆಗೆ ಅನ್ನವು ಬೇಡ; ಕಣ್ಣಿಗೆ ನಿದ್ರೆಯೂ ಬೇಡ. ಹಣವನ್ನು ಹೇಗೆ ಗಳಿಸಬೇಕೆಂಬುವದೇ ಯಾವಾಗಲೂ ಅವರ ಆಲೋಚನೆಯು. ನಿನ್ನ ದೇಹವು ಮಾತ್ರ ಇಲ್ಲಿ ! ಆದರೆ ಧ್ಯಾನವು ನಿನ್ನ ಹಡಗಗಳ ಸರಕು ಮೊದಲಾದವುಗಳ ಮೇಲೆ! ಮಿತ್ರಾ! ಬರಿಯ ಆಲೋಚನೆ ಮಾಡಿ ಮಾಡಿ ಕೊರಗಬೇಡ. ಅಕೋ, ನೋಡು ನಿನ್ನ ಪ್ರಿಯಮಿತ್ರನಾದ ವಸಂತಕುಮಾರನು ಗುರುಪ್ರಸಾದನೊಡನೆ ಬರುತ್ತಿರುವನು. ನಾನು ಈಗ ಹೋಗಿ ಮತ್ತೆ ಭೋಜನದ ವೇಳೆಗೆ ಬಂದು ನಿಮ್ಮನ್ನು ಕಲೆತುಕೊಳ್ಳುವೆನು. ಅದುವರೆಗೆ ನಿಮ್ಮಿರ್ವರ ಆಪ್ತಾಲೋಚನೆಗಳು ನಡೆಯಲಿ. ನನಗೆ ಅಪ್ಪಣೆಯನ್ನು ಕೊಡು. [ಹೋಗುತ್ತಾನೆ.

( ವಸಂತಕುಮಾರನೂ ಗುರುಪ್ರಸಾದನೂ ಬರುತ್ತಾರೆ. )

**ಅನಂತ**:— ಓಹೋ, ದಯಮಾಡಬೇಕು. ಜಹಗೀರದಾರರ ದರ್ಶನವು ಈಗೀಗ ಸಿಕ್ಕುವದೇ ದುರ್ಲಭವಾಗಿರುವದು. (ಗುರುಪ್ರಸಾದನನ್ನು ಕುರಿತು) ಇದರಲ್ಲಿ ನಿನ್ನ ದರ್ಶನವಾಗುವದಂತೂ ನಮ್ಮ ಜನರಿಗೆಲ್ಲ ಸುದರ್ಶನವೆಂದೇ ಹೇಳಬೇಕು. ನಮ್ಮ ವಸಂತಕುಮಾರನ ಆಶ್ರಯವನ್ನು ಬಿಟ್ಟು, ಹೊಸ ಯಜಮಾನನಾದ ಆ ಶೂಲಕ್‌ಚಂದನ ವಿಲೇಖಕನಾಗಿ ನೀನು ಹೋದಾಗಿನಿಂದ ನಿನ್ನನ್ನು ನೋಡುವದೇ ಬಹುಕಷ್ಟಸಾಧ್ಯವಾಗಿದೆ! ಆದರೆ ಒಂದು ವಿಷಯವನ್ನು ಮಾತ್ರ ನಿನ್ನ ಗೆಳೆ

ಯರ ಗುಂಪಿನಿಂದ ನಾನು ಏಕಾಂತವಾಗಿ ಕೇಳಿದೆನು. ಅದು ಎಷ್ಟು ಮಾತ್ರಕ್ಕೆ ನಿಶ್ಚಯವೋ ಈಗಳೆ ನಾನು ಹೇಳಲಾರೆನು !

**ಗುರು:** — ಅನಂತಶ್ರೇಷ್ಠಿಗಳೇ ! ದೈವಸಂಕಲ್ಪವು ಹೀಗೇ ಇರುವದೆಂದು ಯಾರಿಗೂ ತಿಳಿಯದು. (ವಸಂತಕುಮಾರನನ್ನು ತೋರಿಸಿ) ಈತನ ಮಿತ್ರವರ್ಗದಲ್ಲಿ ನಾನೊಬ್ಬನಾಗಿ ಈತನೊಡನೆ ಸಕಲವಿಧಸೌಖ್ಯಗಳನ್ನನುಭವಿಸಿದೆನು. ಬಾಲ್ಯ ದಿಂದಲೂ ನಾನು ಈ ವಸಂತಕುಮಾರನಿಂದಲೆ ವೃದ್ಧಿಗೆ ಬಂದವನು. ನನ್ನ ಮನೆಯಲ್ಲಿ ಈಗ ಉಂಬುವ ಅನ್ನವು ಕೂಡ ಈತನದು. ಹಚ್ಚುವದು ಈತನ ದೀಪವು. ಏನೋ ಈ ದಯಾಸಾಗರನಿಗೆ ದೈವಾನುಕೂಲ್ಯವು ತಪ್ಪಿದ್ದರಿಂದ ಈತನ ಆಶ್ರಯದಲ್ಲಿದ್ದ ನನ್ನಂಥವರು ಬೇರೆ ಆಶ್ರಯವನ್ನಪೇಕ್ಷಿಸಬೇಕಾಯಿತು. ನನ್ನ ಹೊಸ ಯಜಮಾನನಾದ ಶೂಲಕ್‌ಚಂದನು ಮಹಾಕೃಪಣನು. ಕಠಿನಾ ತ್ಮನು. ನಿಷ್ಠುರವಾದಿಯು. ನಾನಾದರೋ ಆತನ ಸೇವಾವೃತ್ತಿಯಲ್ಲಿ ಬಹುಕಾಲ ಇರಲಾರೆನೆಂದೇ ತಿಳಿದಿರುವೆನು. ಆಗಾಗ ನನ್ನ ಮಿತ್ರನು ಧೈರ್ಯಹೇಳುತ್ತಿರು ವದರಿಂದ ಇಂದಿನ ವರೆಗೂ ಆ ಕೃಪಣನನ್ನು ಅನುಸರಿಸಿ ಇರಬೇಕಾಯಿತು. ಈ ಮಹಾರಾಯನಿಗೆ ನಿಮ್ಮಂಥ ಸನ್ಮಿತ್ರರಿಂದ ಸಾಹಾಯ್ಯವು ದೊರೆತ ಸಂಗಡಲೆ ನಾನೂ ಈತನ ಆಶ್ರಯದಲ್ಲಿ ಇರುವವನೇ ಹೊರತು ಬೇರೆ ಕಡೆಯಲ್ಲಿ ಒಂದು ಕ್ಷಣವಾದರೂ ನಿಲ್ಲತಕ್ಕವನಲ್ಲ !

**ಅನಂತ:** — (ನಗುತ್ತ) ಗುರುಪ್ರಸಾದಾ, ನಿನ್ನ ಯಜಮಾನನು ಎಷ್ಟು ಕಠೋರಹೃದಯನಾದರೂ, ನಿನ್ನನ್ನು ಪ್ರೀತಿಸುವ ಪ್ರಾಣಿಯು ಅದೇ ಸ್ಥಳದಲ್ಲಿ ಒಂದಿರುವದೆಂದು ಕೇಳಿರುವೆನು. ಈ ಮಾತಿಗೇನಾದರೂ ಆಧಾರವಿರುವದೋ ? ಬರಿಯ ನಿನ್ನ ಮಿತ್ರರ ಊಹೆಯೋ ?

**ಗುರು:** — ನನ್ನ ಹಿತಚಿಂತಕರಾದ ನಿಮ್ಮಿಂದ ನಾನು ಯಾವದನ್ನೂ ಬಚ್ಚಿಡಲಾರೆನು. ಆದರೆ ಈಗಿನ ಸಂದರ್ಭದಲ್ಲಿ ಮಾತ್ರ ಯಾವದನ್ನೂ ನಿರ್ಧರಿಸಿ ಹೇಳಲಾರೆನು.

**ಅನಂತ:** — ನೀನು ಹೇಳುವ ಮಾತು ನಿನ್ನಂತರಂಗದಲ್ಲಿಯೇ ಇರಲಿ. ಹೂವು ಕಾಯಾದ ಬಳಿಕ ಹಣ್ಣಾಗದೆ ಇರಲಾರದು. ಆಗಲಿ, ನಿನ್ನ ಮುಖ್ಯ ಪ್ರಿಯಸ್ನೇಹಿತನೂ ಆಶ್ರಯದಾತನೂ ಆದ ಈ ವಸಂತಕುಮಾರನ ವಿಚಾರ ವೇನಾಯಿತು? ಏನಯ್ಯಾ ವಸಂತಕುಮಾರಾ ! ನಿನ್ನ ಉಪಾಸನಾದೇವತೆಯನ್ನು ಒಲಿಸಲು ನೀನು ಇದುವರೆಗೂ ಮಾಡುತ್ತಲಿದ್ದ ನಿನ್ನ ಅಂತರಂಗದ ಪೂಜಾ

ವಿಧಾನವು ಎಲ್ಲಿಗೆ ಬಂದಿತು? ಅದೇ ವಿಷಯದಲ್ಲಿ ನೀನು ನನ್ನ ಸಂಗಡ ಆಲೋಚಿಸ ಬೇಕೆಂದು ಹೇಳಿದ್ದಿಲ್ಲವೇ? ಆ ವಿಚಾರವೇನಾಯಿತು ?

**ವಸಂತ**:—ಮಿತ್ರಾ! ಅದೇ ವಿಷಯವಾಗಿಯೇ ನಾನು ನಿನ್ನೊಡನೆ ಆಪ್ತಾಲೋಚನೆಯನ್ನು ಮಾಡಲು ಬಂದಿರುವೆನು. ಮಿತ್ರಾವತಂಸಾ ! ಮತ್ತೂ ನಿನ್ನ ಸಾಹಾಯ್ಯವನ್ನು ಈ ಸಂದರ್ಭದಲ್ಲಿ ನಾನು ಅಪೇಕ್ಷಿಸಬೇಕಾಯಿತು. ಇನ್ನು ನನ್ನ ಸ್ಥಿತಿಗತಿಗಳನ್ನಂತೂ ನೀನು ಚೆನ್ನಾಗಿಯೇ ಅರಿತಿರುವಿ. ಇಂದಿನ ವರೆಗೂ ನಾನು ಬಲು ದುಂದುಗಾರನಂಗಿ ಬಂದ ಹಣವನ್ನೆಲ್ಲ ವ್ಯಯಮಾಡಿದುದೇನೋ ನಿಶ್ಚಯವು. ಆದರೆ ನನ್ನ ಧನವೆಲ್ಲವೂ ಬಡಬಗ್ಗರ ದುಃಖನಿವಾರಣೆಯಲ್ಲಿಯೂ, ಆತ್ಮ ಸುಖದಲ್ಲಿಯೂ ವಿನಿಯೋಗಿಸಲ್ಪಟ್ಟಿತು; ಅಲ್ಲದೆ ಅದರ ದುರ್ವ್ಯಯವಾಗಲಿಲ್ಲ. ಇನ್ನು ಮುಂದೆ ನಾನೊಬ್ಬ ಸಾಧ್ವೀಮಣಿಯ ಕೈಹಿಡಿದು ಸದ್ಗೃಹಸ್ಥನಾಗಿ ಬಾಳ ಬೇಕೆಂಬುದೇ ನನ್ನ ಪೂರ್ಣಾಭಿಲಾಷೆಯು. ನಾನು ಅಪೇಕ್ಷಿಸಿದ ತರುಣೀಮಣಿಯಾದ ಆ ಪ್ರಭಾವತೀದೇವಿಯಾದರೂ ಪ್ರದ್ಯುಮ್ನನ ಪ್ರಿಯಸತಿಯಾದ ಆ ಪ್ರಭಾವತೀ ದೇವಿಗೆ ರೂಪದಲ್ಲಿಯಾಗಲಿ ಗುಣದಲ್ಲಿಯಾಗಲಿ ಸರಿ ತೂಗುವಳೆಂದೇ ಹೇಳ ಬಹುದು. ಅನ್ವರ್ಥನಾಮದಿಂದೊಪ್ಪುತ್ತಿರುವ ಈ ಪ್ರಭಾವತಿಯು ಉತ್ತಮ ಕುಲಸಂಜಾತೆಯು; ಸಾಧುಗುಣಸಂಪನ್ನೆಯು; ವಿದ್ಯಾಕಲಾಕುಶಲೆಯು; ಧನಕನ ಕಾಭರಣವಸ್ತ್ರವಾಹನಾದಿಸಮುಸ್ತವೈಭವಾತಿಶಯಗಳಿಂದೊಪ್ಪುವ ಇಂತಹ ಭಾಗ್ಯ ಶಾಲಿನಿಯ ಕೈಹಿಡಿಯುವ ಪ್ರಾಪ್ತಿಯು ಮಾತ್ರ ನನಗೆ ಲಭಿಸಿದರೆ ನಾನು ನನ್ನ ಕಷ್ಟಗಳನ್ನು ದೂರ ಮಾಡಿಕೊಂಡು ಯಾವಜ್ಜೀವನವೂ ಸುಖಿಯಾಗಿರುವೆನೆಂಬುವ ದಕ್ಕೆ ಯಾವ ಸಂದೇಹವೂ ಇಲ್ಲ. ಇಂತಹ ಸುಸಂಧಿಯನ್ನು ಅಲಕ್ಷಿಸದೆ ಗಾಳಿ ಬಿಟ್ಟಾಗ ತೂರಿಕೊಳ್ಳಬೇಕೆಂದು ನಿನ್ನಲ್ಲಿಗೆ ಬಂದಿರುವೆನು.

**ಅನಂತ**:—ಮಿತ್ರಾ ! ನಿನ್ನ ಮನೋರಥವು, ಈಡೇರಲು ನಿನಗೆ ಬೇಕಾದ ಸಾಹಾಯ್ಯವನ್ನು ನನ್ನ ತನುಮನೋಧನಗಳಿಂದ ಮಾಡಲು ಸಿದ್ಧನೇ ಇರುವೆನು. ಈ ವಿಷಯದಲ್ಲಿ ನಿನಗೆ ಬೇರೆ ಆಲೋಚನೆ ಯಾಕೆ ?

**ವಸಂತ**:—ಎಂದಿಗೂ ಇಲ್ಲ. ಆ ತರುಣೀಮಣಿಯು ತನ್ನ ಪ್ರೇಮಸೂಚಕವಾದ ಕಟಾಕ್ಷವೀಕ್ಷಣಗಳಿಂದ ಆಗಾಗ ನನ್ನನ್ನು ಆದರಿಸುತ್ತಿದ್ದರೂ, ಆಕೆಯು ನನಗೆ ಲಭಿಸುವಳೆಂದು ನಿರ್ಧರಿಸಿ ಹೇಳುವದಕ್ಕೆ ಒಂದೆರಡು ಅಂತರಾಯಗಳಿರುವವು.

**ಅನಂತ**:— ಅಂತಹ ಪ್ರತಿಬಂಧಕಗಳಾದರೂ ಯಾವವಯ್ಯಾ ! ಹೇಳು ಕೇಳೋಣ. ಅವುಗಳಿಗೆ ಪ್ರತಿಕ್ರಿಯೆಗಳಿದ್ದರೆ ಈಗಲೇ ಮಾಡಿ ಬಿಡುವ.

**ವಸಂತ**:— ಮತ್ತೇನೂ ಇಲ್ಲ. ಇವರಲ್ಲಿ ಮೊದಲನೆಯದು ಮಾನುಷೀಯಕವು, ಎರಡನೆಯದು ದೈವಿಕವು.

**ಅನಂತ**:—ಮಿತ್ರಾ ! ಇಂಥ ದ್ವಂದ್ವಾರ್ಥದ ಒಗಟುಗಳು ಬೇಡ. ಬಿಚ್ಚಿ ಮಾತನಾಡು.

**ಗುರು**:—ಇದರಲ್ಲಿ ಬಿಚ್ಚುವದೂ ಇಲ್ಲ. ಮುಚ್ಚುವದೂ ಇಲ್ಲ. ಕಾರ್ಯಸಿದ್ಧಿಗೆ ಕಂಚಾಣವು ಆವಶ್ಯಕವು. ಆ ಪ್ರಭಾವತೀದೇವಿಯೋ ಶ್ರೀಮಂತರ ಏಕಮಾತ್ರಪುತ್ರಿಯು. ಅಂತಹ ಭಾಗ್ಯಶಾಲಿನಿಯ ಪಾಣಿಗ್ರಹಣವನ್ನು ಬಯಸುವವರು ಬರಿಗೈಯಿಂದ ಮೊಳಹಾಕಬಾರದು. ನಾಳಿನ ಸ್ಥಿರವಾರ ಸಾಯಂಕಾಲಕ್ಕೆ ಸರಿಯಾಗಿ ಅನೇಕಶ್ರೀಮತ್ಕುಮಾರರು ಆ ತರುಣೀಮಣಿಯನ್ನು ಪ್ರಸನ್ನೀಕರಿಸಲು ಮಹಾವೈಭವೋಪೇತರಾಗಿ ಅಟ್ಟಹಾಸದಿಂದ ಹೋಗುವರಂತೆ! ಅವರಂತೆ ನಮ್ಮ ಪೂರ್ವಯಜಮಾನರೂ ತಮ್ಮ ಗೌರವಕ್ಕೆ ತಕ್ಕಂತೆ ಸಾಲಂಕೃತರಾಗಿ ಹೋಗಬೇಕು. ಇನ್ನು 'ಆಟಕ್ಕೆ ತಕ್ಕ ವೇಷವೂ ವೇಷಕ್ಕೆ ತಕ್ಕ ಭಾಷೆಯೂ' ಇರಬೇಡವೇ ? ಧನಸಾಹಾಯ್ಯವಿಲ್ಲದೆ ಯಾವ ಕಾರ್ಯವೂ ಕೊನೆಗಾಣಲಾರದು. ಅದರ ಸಲುವಾಗಿಯೇ ಇಂತಹ ಸುಸಂಧಿಯ ಸಮಯದಲ್ಲಿ ನಿಮ್ಮಿಂದೇನಾದರೂ ಸಾಹಾಯ್ಯವಾಗಬಹುದೇನೋ ಎಂದು ಬಂದಿರುವೆವು.

**ಅನಂತ**:— ಆಯಿತು. ಇನ್ನು ದೈವಿಕಪ್ರತಿಬಂಧಕವಾವದು ?

**ಗುರು**:—ಅದು ಬಹಳ ವಿಚಿತ್ರವಾಗಿರುವದು. ಮೃತನಾದ ಆ ಪ್ರಭಾವತೀದೇವಿಯ ತಂದೆಯು ತನ್ನ ಅವಸಾನಕಾಲದಲ್ಲಿ ಒಂದು ಅಪೂರ್ವವಾದ ಮರಣಶಾಸನವನ್ನು ಬರೆದಿಟ್ಟಿರುವನಂತೆ. ಬಂಗಾರ, ಬೆಳ್ಳಿ ಮತ್ತು ಸೀಸ ಈ ಲೋಹಗಳಿಂದ ಮೂರು ಕರಡಿಗೆಗಳನ್ನು ಮಾಡಿಸಿ, ಅವುಗಳೊಳಗಿನ ಒಂದರಲ್ಲಿ ತನ್ನ ಕುಲ ಸ್ವಾಮಿಯ ಚಿತ್ರವನ್ನೂ ಪ್ರಭಾವತಿಯ ಚಿತ್ರವನ್ನೂ ಇಟ್ಟಿದ್ದಾನೆ. ಪ್ರಭಾವತಿಯನ್ನು ವರಿಸಲೆಳಸುವ ವರನು ಈ ದೈವಪರೀಕ್ಷೆಯಲ್ಲಿ ತನಗೆ ಯಶಸ್ಸು ದೊರೆಯದೆ ಹೋದರೆ, ಮುಂದೆ ಯಾವ ಕನ್ಯೆಯನ್ನೂ ಕಾಮಿಸುವದಿಲ್ಲೆಂದೂ, ಹೀಗೆ ನಿರಾಶೆಯಾದ ಬಳಿಕ ತಾನು ಯಾವ ಯಾವ ಸಂಪುಟದಲ್ಲಿ ಏನೇನನ್ನು ನೋಡಿದೆನೆಂಬುದನ್ನು ಯಾರಿಗೂ ಹೇಳುವದಿಲ್ಲೆಂದೂ ದೃಢಪ್ರತಿಜ್ಞೆಯನ್ನು ಮಾಡಬೇಕಾಗುತ್ತದೆ. ಹೀಗೆ ಪ್ರಭಾವತಿಯ ವಿಷಯದಲ್ಲಿದ್ದ ತನ್ನ ನಿಜವಾದ ಪ್ರೇಮವನ್ನು ವ್ಯಕ್ತಗೊಳಿಸುವದಕ್ಕೂ, ಸಂಪುಟಗಳ ರಹಸ್ಯವನ್ನು ಬಚ್ಚಿಡುವದಕ್ಕೂ ಪ್ರತಿಜ್ಞಾಬದ್ಧನಾದ ಯಾವನು ಆ ಕುಲಸ್ವಾಮಿಯ ಮತ್ತು ಪ್ರಭಾವ

ತಿಯ ಚಿತ್ರವನ್ನು ತೆಗೆಯುವನೋ ಅವನೇ ಪ್ರಭಾವತಿಯ ಪತಿಯಾಗಲರ್ಹನು. ಇಂತಹನು ಪ್ರಭಾವತಿಗೆ ಸ್ವಾಮಿಯಾಗುವದಲ್ಲದೆ, ತನ್ನ ಸ್ಥಿರಚರಾಸ್ತಿಗಳಿಗೂ ಸ್ವಾಮಿಯಾಗುವನೆಂದು ಬರೆದಿದ್ದಾನಂತೆ !

**ಅನಂತ**:– ಓಹೋ ! ಸರಿ. ಸರಿ. ಮೊದಲು ಮಾನುಷೀಯಕವಾದ ಪ್ರತಿಬಂಧವನ್ನು ನೀಗಿಕೊಂಡ ಮೇಲೆ ದೈವಪರೀಕ್ಷೆಗೆ ನಿಲ್ಲಬೇಕಾಯಿತಲ್ಲವೆ ?

**ವಸಂತ**:—ನಿಶ್ಚಯ. ಜಗದೀಶನ ಕೃಪೆಯಿಂದಲೂ ನಿನ್ನಂಥ ಪ್ರಿಯಮಿತ್ರನ ಸಾಹಾಯ್ಯದಿಂದಲೂ ಎಲ್ಲವೂ ಕಡೆಹಾಯಿಸಬಹುದೆಂದು ನಾನು ನಿನ್ನಲ್ಲಿಗೆ ಬಂದಿರುವೆನು.

**ಅನಂತ**:—ಆಗಲಿ ಮಿತ್ರಾ ! ಈಗಿನ ಸಂದರ್ಭದಲ್ಲಿ ನಿನಗೆ ಎಷ್ಟು ಹಣವು ಬೇಕಾಗಬಹುದು?

**ವಸಂತ**:—ಕನಿಷ್ಠಪಕ್ಷಕ್ಕೆ ಮೂರು ಸಾವಿರ ರೂಪಾಯಿಗಳಾದರೂ ಬೇಡವೆ ? ನನ್ನ ವಿವಾಹವಾದ ಮಾರನೆಯ ದಿನವೇ ನಾನು ಲಕ್ಷಾಧೀಶನಾಗುವೆನು ಈಗ ಮಾತ್ರ ನಿನ್ನ ಬಾಲ್ಯಸ್ನೇಹಿತನಿಗೆ ಸಾಹಾಯ್ಯಮಾಡಿದರೆ........

**ಅನಂತ**:—ಮಿತ್ರಾ, ವಸಂತಕುಮಾರಾ ! ನನ್ನ ಪ್ರಾಣಸ್ನೇಹಿತನಾದ ನೀನು ನನ್ನನ್ನು ಈ ಪರಿ ದೈನ್ಯಭಾವದಿಂದ ಬೇಡಬಹುದೇ ? ನೀನು ಇಲ್ಲಿಗೆ ಬರುವದಕ್ಕೆ ಎರಡು ನಿಮಿಷಗಳ ಹಿಂದೆ ನನ್ನ ಮಿತ್ರನಾದ ಶಿಲಾದಿತ್ಯನು ನನ್ನನ್ನು ಹಾಸ್ಯಮಾಡುತ್ತಿದ್ದನು. ನನ್ನ ವ್ಯಾಪಾರದ ಆರು ಹಡಗಗಳು ದ್ವೀಪಾಂತರದಲ್ಲಿರುವದರಿಂದ ನಾನು ಅನ್ನೋದಕವನ್ನು ತೊರೆದು ಸದಾ ಚಿಂತಾಕ್ರಾಂತನಾಗಿರುವೆನೆಂದವನು ಹೇಳಿದ ಮಾತು ನಿಜವು. ನೀನು ನಂಬುವಿಯೋ ಇಲ್ಲವೋ ? ಆ ಶಿಲಾದಿತ್ಯನು ಹೇಳಿದಂತೆ ಸದ್ಯಕ್ಕೆ ನನ್ನಲ್ಲಿ ಹಣವಾಗಲಿ, ಸರಕುಗಳಾಗಲಿ ಇಲ್ಲದೇ ಇರುವದರಿಂದ, ನಾನು ಶುದ್ಧವಾಗಿ ನಿರ್ಧನನಾಗಿರುವೆನೆಂಬ ಮಾತು ಸತ್ಯವು. ಆದರೂ ನೀನು ಮಾತ್ರ ಸ್ವಲ್ಪವೂ ಹೆದರಬೇಡ. ಇಂತಹ ಅಪೂರ್ವಸಂದರ್ಭವನ್ನು ಕಳೆದುಕೊಂಡರೆ ಪ್ರಭಾವತಿಯಂತಹ ವಯೋರೂಪವಿಲಾಸಯುತಳೂ, ಧನಕನಕಾದಿಸಕಲವೈಭವೋಪೇತಳೂ ಆದ ತರುಣೀಮಣಿಯು ಎಂದಿಗೂ ನಿನ್ನ ಸತಿಯಾಗಿ ದೊರೆಯಲಾರಳು. ಆದುದರಿಂದ ನನ್ನಲ್ಲಿ ಸದ್ಯಕ್ಕೆ ಹಣವು ದೊರೆಯದಿದ್ದರೂ ವಿಶ್ವಪ್ರಯತ್ನವನ್ನು ಮಾಡಿ ನೀನಪೇಕ್ಷಿಸುವ ಮೂರು ಸಾವಿರ ರೂಪಾಯಿಗಳನ್ನು ಅನ್ಯತ್ರ ನಾನು ನಿನಗೆ ದೊರಕಿಸಿಕೊಡುವೆನು. ನಮ್ಮ ಗುರುಪ್ರಸಾದನ ಯಜಮಾನನಾದ ಆ ಶೂಲಕ್‌ಚಂದನು ವ್ಯಾಪಾರೋದ್ಯೋಗಗಳಲ್ಲಿ ನನ್ನ ದ್ವೇಷಿಯಾಗಿದ್ದರೂ ಮಹಾಪ್ರಬಲನು. ಅಧಿಕಧನವುಳ್ಳವನು.

ಅನ್ಯರಲ್ಲಿ ದೊರೆಯದಿದ್ದರೂ ಅವನಲ್ಲಿ ನಮಗೆ ಬೇಕಾದ ಹಣವು ಸಿಗುವದಕ್ಕೆ ಸಂದೇಹವಿಲ್ಲ. ಏನಯ್ಯಾ, ಗುರುಪ್ರಸಾದಾ, ಇದಕ್ಕೆ ನೀನೇನೆನ್ನುವಿ ? ನಿನ್ನ ಸಾಹಸದಿಂದ ನನ್ನ ಪ್ರಿಯಸ್ನೇಹಿತನ ಕಾರ್ಯಸಿದ್ಧಿಯಾಗಬಹುದಲ್ಲವೆ ?

**ಗುರು:**—ಅಯ್ಯೋ, ರಾಮ, ರಾಮ ! ಮೊದಲೇ ನಮ್ಮ ಜನಾಂಗದವರನ್ನು ಕಂಡರೆ ವಿಷವನ್ನೇ ಕಾರುವ ವೃದ್ಧಕೃಪಣನು ಎಂದಿಗೂ ನಿಮಗೆ ಸಹಾಯನಾಗಲಾರನು. ಶಿಲೆಯಲ್ಲಿ ಜಲವು ಸ್ರವಿಸುವದು ಹೇಗೋ, ಅದರಂತೆಯೇ ಆ ಲೋಭಿಯಲ್ಲಿ ಹಣವನ್ನು ದೊರಕಿಸುವ ಭರವಸೆಯು.

**ವಸಂತ:**—ಆಗಲಿ. ನಮ್ಮ ಪ್ರಾಪ್ತಿಯು ಎಷ್ಟರ ಮಟ್ಟಿಗಿರುವದೋ ನೋಡಿ ಬಿಡುವ. ನೀನು ಮಾತ್ರ ನಾನು ನಿಮ್ಮ ಅಂಗಡಿಗೆ ಬರುವ ಸಮಯದಲ್ಲಿ, ನಿಮ್ಮ ಯಜಮಾನನ ಬಳಿಯಲ್ಲಿದ್ದರೆ ಸಾಕು. ಅದರಿಂದೆಷ್ಟೋ ನನಗೆ ಸಾಹಾಯ್ಯವಾಗಬಹುದು.

**ಗುರು:**—ಆಗಬಹುದು. ನಾನಾದರೂ ನಮ್ಮ ಅಂಗಡಿಯ ಕಡೆಗೇ ಹೋಗತಕ್ಕವನು. ಆಗಲೇ ಹೊತ್ತಾಯಿತು. [ ಹೋಗುತ್ತಾರೆ.



## ೨ನೆಯ ರಂಗ—ವೇಣುಪುರಿಯ ಉತ್ತರಭಾಗದಲ್ಲಿರುವ ಸೌರಾಷ್ಟ್ರಪುರಿಯ ವಸಂತೋದ್ಯಾನದೊಳಗಿನ ಪ್ರಭಾವತಿಯ ಮಂದಿರವು

( ಪ್ರಭಾವತೀದೇವಿಯು ತನ್ನ ದಾಸಿಯಾದ ನರ್ಮದೆಯೊಡನೆ ಕುಳಿತಿರುತ್ತಾಳೆ. )

**ಪ್ರಭಾ:**—ನರ್ಮದಾ, ಈಗೇಕೋ ನನ್ನ ಮನಸ್ಸಿಗೆ ಈ ಲೋಕವೇ ಬೇಡವಾಗಿರುವದು ನೋಡಿದೆಯಾ ? ಇದರ ಕಾರಣವೇನಿರಬಹುದು ?

**ನರ್ಮದೆ:**—ದೇವೀ, ಇದರ ಕಾರಣವನ್ನು ಬಿಚ್ಚಿ ಬೇರೆ ಹೇಳಬೇಕೇನು? ಜಗದೀಶನು ಆವ ಕೊರತೆಯನ್ನೂ ಕೊಡದೆ ಸದಾ ಸೌಖ್ಯದಲ್ಲಿಯೇ ನಿಮ್ಮನ್ನು ಇಟ್ಟಿರುವದರಿಂದ ನಿಮಗೆ ಎಲ್ಲವೂ ಬೇಸರವೇ ಸರಿ. ಈ ಲೋಕದಲ್ಲಿ ಹೊಟ್ಟೆಗಿದ್ದರೆ ಬಟ್ಟೆಗಿಲ್ಲದೆ, ಬಟ್ಟೆಗಿದ್ದರೆ ಹೊಟ್ಟೆಗಿಲ್ಲದೆ ಸದಾ ಶ್ರಮಭಾಗಿಗಳಾಗಿ ದುಃಖಿಸುವ ಜನರನೇಕರಿರುವರು. ನಿಮಗೆ ಆನಂದದುಃಖಗಳ ತಾರತಮ್ಯವೇ ತಿಳಿಯದು. ದುಃಖದ ಅನುಭವವಿಲ್ಲದೆ ಸದಾ ಸುಖದಲ್ಲಿರುವ ನಿಮಗೆ ಎಲ್ಲವೂ ಬೇಸರವಲ್ಲವೆ? ಅಧಿಕಾರಸಂಪತ್‌ಸೌಭಾಗ್ಯವಯೋರೂಪಗಳಿಂದೊಪ್ಪುವ ನಿಮ್ಮಂಥ ಶ್ರೀಮತ್ ಕುಮಾರಿಗೆ ಕೊರತೆಯೇನು ? ಸರ್ವತಂತ್ರಸ್ವತಂತ್ರರಾದ ನಿಮಗೆ ಸರಿಯಾರಿರುವರು ?

**ಪ್ರಭಾ:**—ನರ್ಮದಾ ! ಭಟ್ಟಂಗಿಯು ಹೊಗಳುವಂತೆ ಎಷ್ಟು ಪರಿಯಿಂದ ಮುಖಸ್ತೋತ್ರವನ್ನು ಮಾಡಲಾರಂಭಿಸಿದೆಯೇ ನೀನು ?

**ನರ್ಮದೆ:**—ದೇವೀ, ಪೂರ್ಣಚಂದ್ರನಂತೆ ವಿರಾಜಿಸುವ ನಿಮ್ಮ ಮುಖವು ಸ್ತೋತ್ರಾರ್ಹವಲ್ಲವೆಂದು ಯಾರು ಹೇಳುವರು?

**ಪ್ರಭಾ:** - ಭಲೆ, ಭಲೆ, ನರ್ಮದೇ ! ನಿನ್ನ ವಾಕ್ಯಗಳು ಕಾವ್ಯಾಲಂಕಾರ ಪೂರಿತವಾಗಿರುವವು. ಸರ್ವಸ್ವತಂತ್ರಳಾದ ನನಗೆ ದುಃಖವೇ ಇಲ್ಲವೆಂದು ಹೇಳಿದೆಯಲ್ಲವೇ? ತಾಯೀ ಇಂತಹ ಸ್ವಾತಂತ್ರ್ಯವು ನನ್ನ ವೈರಿಗಳಿಗೂ ಬೇಡ. ಪೂಜ್ಯನಾದ ನನ್ನ ಜನಕನ ಅನುಜ್ಞೆಯನ್ನು ಪರಿಪಾಲಿಸುವದರಲ್ಲಿ ನಾನು ವೃದ್ಧ ಕನ್ಯಕೆಯಾಗುವೆನೋ ಏನೋ ಕಾಣೆನು ! ನಾನು ಮೆಚ್ಚಿದ ಪುರುಷವರ್ಯನನ್ನು ನಾನು ವರಿಸಲಾರೆನು. ಬೇಡಾದವನನ್ನು ತ್ಯಜಿಸಲಾರೆನು. ಇದು ಎಂತಹ ಸ್ವಾತಂತ್ರ್ಯವವ್ವಾ ನೀನೇ ಹೇಳು? ಮೃತಿಹೊಂದಿದ ನನ್ನ ಜನಕನು ತನ್ನ ಮನಸ್ಸಿಗೆ ಬಂದುದನ್ನೆಲ್ಲ ಬರೆದಿಟ್ಟು ಹೋದನು. ಜೀವದಿಂದಿರುವ ಆತನ ಪುತ್ರಿಯು ಅವನ್ನನುಸರಿಸಿ ನಡೆದುಕೊಂಬುದು ಹೇಗೆ ? ಬಾಯಿಂದ ಸಾವಿರ ಹೇಳಬಹುದಾದರೂ ಅದರಂತೆ ಒಂದನ್ನಾದರೂ ಆಚರಣೆಯಲ್ಲಿ ತರುವದು ಕಡು ಕಷ್ಟವು! ನನ್ನ ತಂದೆಯನ್ನು ಅವಜ್ಞೆಮಾಡುತ್ತೇನೆಂದು ಮಾತ್ರ ಭಾವಿಸಬೇಡ. ಸ್ವಾರ್ಥಮೂಲಕವಾದ ಸಂದೇಹದಿಂದ ಮನಸ್ಸಿನಲ್ಲಿ ಈ ವಿಧದ ಚಾಂಚಲ್ಯವುಂಟಾಗುತ್ತದೆ.

**ನರ್ಮದೆ:**— ಅಹುದು. ದೇವೀ, ಪರಮಪೂಜ್ಯರಾದ ನಿಮ್ಮ ಜನಕನ ವಿಷಯಲ್ಲಿ ಮಾತ್ರ ನಿಮಗೆ ಬೇರೆ ಭಾವನೆಯು ಬೇಡ. ಆತನು ಮಹಾಪುಣ್ಯಶಾಲಿಯು; ಜ್ಞಾನನಿಧಿಯು; ದೀರ್ಘಾಲೋಚನಪರನು. ನಿಮ್ಮ ಶ್ರೇಯೋಭಿವೃದ್ಧಿಯಾಗಬೇಕೆಂದು ಭಗವತ್ಪ್ರೇರಣೆಯಿಂದ ಅವನು ಈ ರೀತಿಯಾಗಿ ಏರ್ಪಾಡು ಮಾಡಿರಲಿಕ್ಕೆ ಬೇಕು. ಆದುದರಿಂದ ನಿಮಗೆ ಪರಮಪ್ರೀತಿಪಾತ್ರನಾದವನೇ ನಿಮ್ಮ ರೂಪಚಿತ್ರವನ್ನು ಆರಿಸಿ ತೆಗೆಯುವನೆಂಬುವಕ್ಕೆ ಸಂದೇಹವಿಲ್ಲ. ಈ ವಿಷಯದಲ್ಲಿ ನೀವು ಸ್ವಲ್ಪವೂ ಆಲೋಚಿಸಬೇಡಿರಿ.

( ಸೇವಕನು ಬರುತ್ತಾನೆ. )

**ಸೇವಕ:** — ದೇವಿಯವರಿಗೆ ಜಯವಾಗಲಿ ! ಅನೇಕರಾಜರೂ ರಾಜಕುಮಾರರೂ ತಮ್ಮ ದರ್ಶನಾಕಾಂಕ್ಷಿಗಳಾಗಿ ಅತಿಥಿಗೃಹದಲ್ಲಿ ಬಂದು ಕಾದಿರುವರು.

**ಪ್ರಭಾ:**—ಆಗಲಿ. ಅವರವರ ಮರ್ಯಾದೆಗಳಿಗೆ ತಕ್ಕಂತೆ ಅತಿಥಿಸತ್ಕಾರಗಳನ್ನು ಮಾಡಿ ನಮ್ಮ ಸಭಾಮುಂದಿರಕ್ಕೆ ಕರೆತರಬೇಕೆಂದು ಇತರ ಸೇವಕಜನರಿಗೆಲ್ಲ ಹೇಳು.

**ಸೇವಕ:—** ಅಪ್ಪಣೆ. [ ಹೋಗುತ್ತಾನೆ.

**ಪ್ರಭಾ:** – ನರ್ಮದೇ, ನಾವೂ ಹೋಗಿ ಆ ಶ್ರೀಮುತ್ ಕುಮಾರರ ಸಮಾಚಾರವನ್ನು ವಿಚಾರಿಸುವ ಬಾ. [ ಹೋಗುತ್ತಾರೆ.



## ೩ ನೆಯ ರಂಗ:— ವೇಣುಪುರಿಯ ಚಿನಿವಾರಗಟ್ಟೆಯಲ್ಲಿರುವ ಶೂಲಕ್‌ಚಂದ ಮಾರವಾಡಿಯ ಅಂಗಡಿ

**ಶೂಲಕ್:—** ಈ ಪಟ್ಟಣದ ಶೆಟ್ಟಿಸಾಹುಕಾರರನ್ನೆಷ್ಟು ಪರಿ ನಾನು ದೂರಿದರೂ ಸ್ವಲ್ಪವೇ ಸರಿ. ತಾವು ಮಾತ್ರ ಬಡಜನರ ತಲೆಯ ಮೇಲೆ ಕಲ್ಲು ಹಾಕಿ ಹಣವನ್ನು ಗಳಿಸಬಹುದಂತೆ! ನಾನು ಬಡ್ಡಿಗೆ ಬಡ್ಡಿಯನ್ನು ಕಟ್ಟಿ ದುಡ್ಡನ್ನು ಸಂಪಾದಿಸಬಾರದಂತೆ! ಅದು ಯಾಕೆ? ನಮ್ಮ ಜಾತಿಯ ಜನರನ್ನು ಅವರು ಪ್ರತಿ ಹಳ್ಳಿಯಲ್ಲಿ ನೀರಿಲ್ಲದೆ ಬೆಳೆಯುವ ಮುಳ್ಳುಗಳ್ಳಿ (ಚಪಾತಿ ಕಳ್ಳಿ)ಗೆ ಹೋಲಿಸಿ ನಮ್ಮನ್ನು ಹೊಟ್ಟೆಗೆ ತಿನ್ನದ ಪಿಸಿನಾಸಿಗಳೆನ್ನುವರು. ದೀಪದ ಪೆಟ್ಟಿಗೆಯ ಮಾರಲು ಈ ದೇಶಕ್ಕೆ ಬಂದ ಗಂಟುಗಳ್ಳರೆಂಬುವರು. ಬಡಜನರ ಕೊಂಪಿಯನ್ನು ಕೊಳ್ಳಿಸುವ ವಂಚಕರೆಂಬುವರು. ತಾವು ಮಾತ್ರ, ಮಹಾಧಾರ್ಮಿಕರಂತೆ! ಸತ್ಪ್ರವರ್ತನದವರಂತೆ! ಬಡವರ ಗಂಟನ್ನು ಮುಳುಗಿಸಿ ತಾವೂ ಬಡವರಂತೆ ವೇಷ ಹಾಕಿಕೊಂಡು ದಿವಾಳೀ ತೆಗೆದ ಇವರ ಎಷ್ಟೋ ದುರಾಚಾರಗಳನ್ನು ನಾನು ನೋಡಿರುವೆನು. ಈ ವರ್ತಕಜನರಲ್ಲಿ ಅನಂತಶ್ರೇಷ್ಠಿಯು ನನ್ನ ಜಾತಿದ್ವೇಷಿಯು. ನಾನು ವ್ಯಾಪಾರಕ್ಕಾಗಿ ಎಲ್ಲಿ ಎಲ್ಲಿಗೆ ಹೋಗುವೆನೋ, ಅಲ್ಲಿ ಅಲ್ಲಿಗೆ ಇವನೂ ಬಂದು ನನ್ನ ಹುಳುಕುಗಳನ್ನು ಹೊರಗೆಡವಿ, ನನ್ನ ವ್ಯವಹಾರದಲ್ಲಿ ಮೋಸವಿದೆಯೆಂದು ಹೇಳಿ ಹಲವು ಬಗೆಯ ನಿಷ್ಠುರೋಕ್ತಿಗಳಿಂದ ದೂರಿ ದೂಷಣೆಮಾಡಿ ನನ್ನ ವ್ಯಾಪಾರವನ್ನೆಲ್ಲ ಕೆಡಿಸುವನು. ಹೆಡ್ಡನಾದ ಇವನು ಬಡ್ಡಿಯಿಲ್ಲದೆ ಸಾಲಕೊಡುವದರಿಂದ ಈ ವೇಣುಪುರಿಯ ವ್ಯಾಪಾರವೇ ಕೆಟ್ಟುಹೋಗಿದೆ. ಆಗಲಿ. ಇವನು ಒಮ್ಮೆಲ್ಲೊಮ್ಮೆ ನನ್ನ ಕೈಯಲ್ಲಿ ಸಿಕ್ಕರೆ, ಹೊಟ್ಟೆಯೊಳಗಿನ ಸಿಟ್ಟನ್ನೆಲ್ಲ ತೀರಿಸಿಕೊಳ್ಳುವಂತೆ ಇವನ ಹೆಣಹಾಕದಿದ್ದರೆ ನಾನು ಶೂಲಕ್‌ಚಂದ ಮಾರವಾಡಿಯೇ ಅಲ್ಲ !

( ಗುರುಪ್ರಸಾದನು ಬರುತ್ತಾನೆ. )

**ಶೂಲಕ್:—** ಏನು ಗುರುಪ್ರಸಾದರೆ ! ಏತಕ್ಕೆ ಇಷ್ಟು ಆಲಸ್ಯಮಾಡಿ ಬಂದಿರಿ ? ಕೆಲಸವಲ್ಲಿ ನೀವು ಇಷ್ಟು ಅಶ್ರದ್ಧೆಮಾಡಿದರೆ ನಿಮ್ಮ ಮುಂದಿನ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ! ನಾನು ಖಂಡಿತವಾದಿಯು. ಇತರ ಮುತ್ಸಾಳ ಚಿನಿವಾರರಂತೆ ನನ್ನಲ್ಲಿ ಹೊರಗೊಂದು ಒಳಗೊಂದು ಆಚರಣೆಗಳಿರವು !

**ಗುರು:**— ಶೆಟ್ಟಿಗಳೇ ಕ್ಷಮಿಸಬೇಕು. ತಮ್ಮನ್ನು ಕಾಣಬೇಕೆಂದು ತಮ್ಮ ಮನೆಯ ವರೆಗೆ ಹೋಗಿ ಇಲ್ಲಿಗೆ ಬಂದೆನು.

**ಶೂಲಕ್:**— ಏನು ? ನಾನಿಲ್ಲದ ವೇಳೆಯಲ್ಲಿ ನನ್ನ ಮನೆಯಲ್ಲಿ ನಿಮ್ಮ ಕಾರ್ಯವೇನು ? ನಾನು ಇಲ್ಲಿಗೆ ಬಂದು ಆಗಲೇ ಅರ್ಧತಾಸು ಮೀರಿತು.

**ಗುರು:**— ತಾವು ಈಗಳೆ ಅಂಗಡಿಯ ಕಡೆಗೆ ಹೋದಿರೆಂದು ತಮ್ಮ ಮಗಳೇ ಹೇಳಿದಳು.

**ಶೂಲಕ್:**— ಅವಳೊಂದಿಗೆ ನೀವು ಸಂಭಾಷಿಸಕೂಡದೆಂದು ನಾನೆಷ್ಟು ಸಾರಿ ಹೇಳಿದರೂ ನಿಮಗೆ ತಿಳಿಯಲೊಲ್ಲದು ! ನಾನಿಲ್ಲದ ಸಮಯದಲ್ಲಿ ನೀವು ನಮ್ಮ ಮನೆಗೆ ಬರುವದೂ, ಒಂದು ವೇಳೆ ಕಾರ್ಯಾರ್ಥಿಗಳಾಗಿ ಬಂದರೂ ನೀವು ನನ್ನ ಮಗಳ ಸಂಗಡ ಇಲ್ಲದ ಹರಟೆಗಳನ್ನು ಹೊಡೆಯುತ್ತ ನಿಲ್ಲುವದೂ ನನಗೆ ಸೇರುವದಿಲ್ಲ! ಆದುದರಿಂದ ಮತ್ತೊಮ್ಮೆ ನಿಮಗೆ ಖಂಡಿತವಾಗಿ ಹೇಳಿರುವೆನು! ಅದು ಹಾಗಿರಲಿ. ನಮ್ಮಿಂದ ಸಾಲವನ್ನು ತೆಗೆದುಕೊಂಡು ತಿರುಗಿಕೊಡುವ ಅವಧಿಯು ಮೀರಿದವರಿಗೆಲ್ಲ ದುಗುಣಿಯ ಬಡ್ಡಿಯನ್ನು ಹಾಕಬೇಕೆಂದು ಹೇಳಿದ್ದೆನು. ನೀವು ಆ ಪ್ರಕಾರ ಲೆಕ್ಕಗಳಲ್ಲಿ ಸೇರಿಸಿರುವಿರಷ್ಟೇ ?

**ಗುರು:** —ಧನಸ್ಥರಾದವರಿಗೆಲ್ಲ ಹಾಗೆ ಮಾಡಿರುವೆನು. ಆದರೆ ಬಡವರಿಗೆ—

**ಶೂಲಕ್:**— ಬಡವರಾಗಲಿ! ಬಲ್ಲಿದರಾಗಲಿ! ನಾನು ಕರುಣವನ್ನು ತೋರಿಸಲಾರೆನು !

( ವಸಂತಕುಮಾರನು ಬರುತ್ತಾನೆ. )

**ಶೂಲಕ್:** —ರಾಮ್ ರಾಮ್. ವಸಂತಕುಮಾರಮಹಾರಾಜ್. ಆಯೇ ಭೈಠೀಯೇ ! ಸಬ್ ಠೀಕ್ ಹೈ ?

**ವಸಂತ:**— ಶೆಟ್ಟೀ ಮಹಾರಾಜ, ನಿಮ್ಮಲ್ಲಿ ನಾನೊಂದು ಕಾರ್ಯಕ್ಕಾಗಿ ಬಂದಿರುವೆನು. ಒಂದು ಗೃಹಕೃತ್ಯದ ಸಲುವಾಗಿ ನನಗೆ ಈ ದಿನವೇ ಮೂರು ಸಾವಿರ ರೂಪಾಯಿಗಳು ಬೇಕಾಗಿರುವವು.

**ಶೂಲಕ್:**— ಮೂರು ಸಾವಿರ ರೂಪಾಯಿಗಳು ಬೇಕಾಗಿರುವವೇ ? ಮೂರು ಸಾವಿರ ರೂಪಾಯಿಗಳು. ಹುಂ.

**ವಸಂತ:**— ಅಹುದು. ಮೂರುಸಾವಿರ ರೂಪಾಯಿಗಳು ಇಂದೇ ಬೇಕಾಗಿರುವವು. ಮೂರು ತಿಂಗಳುಗಳೊಳಗಾಗಿ ತೀರಿಸುವೆನು.

**ಶೂಲಕ್:**— ಅಚ್ಛಾ, ಅಚ್ಛಾ, ಬಹುತ ಅಚ್ಛಾ! ಬಹುತ್ ಠೀಕ್! ಒಳ್ಳೆ

ಯದು. ಮೂರು ಸಾವಿರ ರೂಪಾಯಿಗಳನ್ನು ಮೂರು ತಿಂಗಳುಗಳೊಳಗಾಗಿ ತೀರಿಸುವಿರಿ. ಸರಿ! ಸರಿ! ಆದರೆ ರೂಪಾಯಿಗಳಿಗೆ ಭರವಸೆಯು !

**ವಸಂತ:**— ಭರವಸೆಗಾಗಿ ಅನಂತಶ್ರೇಷ್ಠಿಯು ಇರುವನು. ಇನ್ನೇನು ಹೇಳಲಿ ?

**ಶೂಲಕ್:**— ಭೇಷ್, ಭೇಷ್ ! ಮೂರುಸಾವಿರ ರೂಪಾಯಿಗಳು. ಮೂರು ತಿಂಗಳುಗಳಿಗೆ ತೀರಿಸುವಿರಿ. ಇದರ ಹೊಣೆಗಾಗಿ ಅನಂತಶ್ರೇಷ್ಠಿಯು ಇರುವನು. ಇನ್ನೇನು ಬೇಕು ? ಠೀಕ್ ಠೀಕ್.

**ವಸಂತ:**— ಇದಕ್ಕೆ ನೀವು ಏನಂದಂತಾಯಿತು ?

**ಶೂಲಕ್:**— ಅನ್ನುವದೇನಿದೆ ? ಅನಂತಶ್ರೇಷ್ಠಿಯು ಮಹಾಘನತೆ ಹೊಂದಿದ ಮನೆತನದವನು. ತುಂಬ ದುಡ್ಡುಳ್ಳವನು. ಬಹಳ ಚೆನ್ನಾಗಿರುವದು. **ಬಹುತ್ ಅಚ್ಛಾ** !

**ವಸಂತ:**— ಯಾರು ಅಲ್ಲವೆನ್ನುವರು? ಅವರಿಗೆ ಹೆಸರಿಟ್ಟವರನ್ನು ನೀವೆಲ್ಲಾದರೂ ಕಂಡಿದ್ದೀರಾ? ಶೂಲಕ್ ಚಂದ, ನಿಮ್ಮ ಮನದಲ್ಲಿಯ ಗುಟ್ಟು ತಿಳಿಯಲಿಲ್ಲ. ( **ರೋಷದಿಂದ** ) ಅನಂತಶ್ರೇಷ್ಠಿಯ ವಿಷಯದಲ್ಲಿ ನಿಮಗೆ ಏನಾದರೂ ಅನುಮಾನವಿದ್ದರೆ ಈಗಲೇ ಹೇಳಿಬಿಡಿರಿ. ನಾನು ಹೊರಟೆನು!

**ಶೂಲಕ್:**— ಅಂತಹ ದೊಡ್ಡ ಮನುಷ್ಯನ ವಿಷಯದಲ್ಲಿ ಅನುಮಾನವೇ? ಛೆ ಛೆ ಛೆ, ರಾಮ್ ರಾಮ್ ! ರಾವಸಾಹೇಬ್ ಅವರು ಹೊಣೆಯಾದರೆ ಹಣ ಕೊಡಲು ಅಭ್ಯಂತರವಿಲ್ಲ; ಆದರೆ ಸದ್ಯಕ್ಕೆ ಅವರ ಕೈಯೆಲ್ಲ ಕಟ್ಟಿಹೋಗಿದೆಯಲ್ಲವೇ ! ಅವರ ಹಡಗಗಳು ಬೇರೆ ಬೇರೆ ದಿಕ್ಕಿನಲ್ಲಿ ಹೊಯ್ದಾಡುತ್ತಿರುವವು. ಅದರಿಂದ ಅವರ ದುಡ್ಡು ದುಗ್ಗಾಣಿ ಸರಕು ಸಟ್ಟೆ ಎಲ್ಲವೂ ಅತ್ತಿತ್ತ ಹರಡಿ ಹೋಗಿದೆ. ಮರಕಟ್ಟುಗಳಾದ ಹಡಗುಗಳದೂ ಮರ್ತ್ಯರಾದ ಅಂಬಿಗರದೂ ನೆಚ್ಚಿಗೆಯಲ್ಲ ! ಆ ಹಡಗಗಳು ಒಂದು ವೇಳೆ ಗಾಳಿಗೆ . ಸಿಕ್ಕಾಗಲಿ ಬಂಡೆಗಳಿಗೆ ತಗಲಿಯಾಗಲಿ ಮುಳುಗಿದರೆ ಅಧೋಗತಿಯೇ ಸರಿ! ಆ ಮೇಲೆ ನಾನು ಕೊಟ್ಟ ಮೂರುಸಾವಿರ ರೂಪಾಯಿಗಳಿಗೆ ಮುಂದೇನು ಗತಿ ? ಆದರೆ ಆ ಅನಂತ ಶ್ರೇಷ್ಠಿಯು ಮಾತ್ರ ಒಳ್ಳೆಯ ಪ್ರಾಮಾಣಿಕನು. ಅವನು ಎಂದಿಗೂ ದಿವಾಳಿ ತೆಗೆಯಲಾರನು. ಸರಿ. ಸರಿ. ನಿಮಗೆ ಇಂದಿನ ದಿನವೇ ಮೂರು ಸಾವಿರ ರೂಪಾಯಿಗಳು ಬೇಕು. ಅದಕ್ಕೆ ಅನಂತಶ್ರೇಷ್ಠಿಯು ಭರವಸೆಯಲ್ಲವೆ ? ಆಗಲಿ, ಆತನು ಬಂದರೆ ಆತನನ್ನು ಕಂಡು ನಾನು ಮಾತನಾಡುವೆನು.

**ವಸಂತ:**— ಅಗತ್ಯವಾಗಿ ಅಗಲಿ. ಆತನೂ ಇಲ್ಲಿಗೆ ಬಂದನು ನೋಡಿರಿ. ಆತನೊಡನೆ ಬೇಕಾದ ಮಾತನಾಡಿರಿ. ಭರವಸೆಯನ್ನು ಬೇಡಿರಿ.

( ಅನಂತಶ್ರೇಷ್ಠಿಯು ಬರುತ್ತಾನೆ. )

**ಅನಂತ:** – ರಾವಮ್ ರಾಮ್ ಸೆಟ್ಟೀ !

**ಶೂಲಕ್:**— (ಮರೆಯಲ್ಲಿ) ಈ ಸಮಯದಲ್ಲಿ ಮಾತ್ರ, ಈ ನೀಚನನ್ನು ಪಾತಾಳಕ್ಕೆ ತುಳಿಯದೆ ಬಿಡಬಾರದು. (ಪ್ರಕಾಶವಾಗಿ) ರಾವಮ್ ರಾವಮ್, ರಾವಮ್ ರಾವಮ್. ಆವ, ಶೆಟ್ಟೀ ಮಹಾರಾಜ್, ಬನ್ನಿ. ಕುಳಿತುಕೊಳ್ಳಿ. ಎಲೆಅಡಿಕೆ ಹಾಕಿಕೊಳ್ಳಿ. ಚುಟ್ಟಾ, ಬೀಡಿ ಬೇಕಾದರೆ ಕೊಡುವೆನು.

**ಅನಂತ:**— ಶೆಟ್ಟೀ ! ನನಗಾವುದೂ ಬೇಡ. ನಮ್ಮ ವಸಂತಕುಮಾರ ಜಹಗೀರದಾರರು ಬೇಡುವ ಹಣವು ನಿನ್ನಲ್ಲಿ ಸಿಕ್ಕುವದೇ ಇಲ್ಲವೇ ಹೇಳಿಬಿಡು !

**ಶೂಲಕ್:**— ಅದಕ್ಕೆ ತಾವು ಭರವಸೆಯು !

**ಅನಂತ:** — ಅಗತ್ಯವಾಗಿ. ಸಂತೋಷಪೂರ್ವಕವಾಗಿ. ಇನ್ನೇನಾದರೂ ಇದ್ದರೆ ಹೇಳಿ ಬಿಡು !

(ಅನಂತಶ್ರೇಷ್ಠಿ ವಸಂತಕುಮಾರರು ದೂರದಲ್ಲಿ ತಮ್ಮತಮ್ಮಲ್ಲಿಯೇ ಏಕಾಂತವಾಡುತ್ತಿರುವರು.)

**ಶೂಲಕ್:** – ( ಮರೆಯಲ್ಲಿ ) ಒಳ್ಳೆಯ ಸಮಯವೇನೋ ದೊರೆಯಿತು. ಹೇಗಾದರೂ ಇವನನ್ನು ಕತ್ತರಿಯಲ್ಲಿರುಕಿಸಿ ಕುತ್ತಿಗೆಯನ್ನು ಕೊಯ್ಯದಿದ್ದರೆ ನಾನು ಬದುಕಿ ಪ್ರಯೋಜನವಿಲ್ಲ !

**ಅನಂತ:**— ಶೆಟ್ಟೀ, ಶೂಲಕ್‌ಚಂದ, ಇನ್ನೂ ಏನಾದರೂ ನಿನ್ನ ಮನದಲ್ಲಿ ಸಂದೇಹವಿದ್ದರೆ ಬಾಯಿಬಿಚ್ಚಿ ಮಾತನಾಡು.

**ಶೂಲಕ್:**— ಮತ್ತೇನೂ ಇಲ್ಲ. ಸದ್ಯಕ್ಕೆ ನನ್ನಲ್ಲಿ ಹಣವಿಲ್ಲವೆಂಬುವದೇ ಆಲೋಚನೆಯು !

**ಅನಂತ:**— ಮಿತ್ರಾ! ಹಾಗಿದ್ದ ಬಳಿಕ ಇಲ್ಲಿ ನಮ್ಮ ಕಾರ್ಯವಿಲ್ಲ. ಬಾ! ಹೋಗುವ.

**ಶೂಲಕ್:**— ಹಾಗೆ ಮಾಡಬೇಡಿರಿ ಸ್ವಾಮಿ, ಬನ್ನಿರಿ. ನನ್ನ ಮಿತ್ರನಾದ ತೋಡರಮಲ್ಲನ ಬಳಿಗಾದರೂ ಹೋಗಿ ಅವನಿಂದ ಕೈಗಡವನ್ನು ತಂದು ನಿಮ್ಮ ಅವಸರಕ್ಕೆ ರೂಪಾಯಿಗಳನ್ನು ಒದಗಿಸಿಕೊಡುವೆನು. ಆದರೆ......

**ಅನಂತ:**— ಅಕೊ, ಮತ್ತೆ ಆದರೆಗೀದರೆ ಎಂಬುವ ಮಾತೇ ಬೇಡ. ನಿನ್ನ ಮನದಲ್ಲಿರುವದನ್ನೆಲ್ಲ ಒಂದೇ ಸಾರಿ ಬಿಚ್ಚಿ, ಹೇಳಿಬಿಡು !

**ಶೂಲಕ್**:— ಅಂತಹ ವಿಶೇಷವೇನೂ ಇಲ್ಲ. ಮೂರುಸಾವಿರ ರೂಪಾಯಿಗಳು ಮೂರು ತಿಂಗಳುಗಳಿಗಲ್ಲವೆ?

**ಅನಂತ**:—ಅಹುದಯ್ಯಾ ಅಹುದು! ಅದಕ್ಕೆ ನಾನೇ ಹೊಣೆಯಾಗುವೆನು. ಇಂದಿನವರೆಗೆ ನಾನು ಯಾರಲ್ಲಿಯೂ ಸಾಲಕೇಳಿದವನಲ್ಲ; ಬಡ್ಡಿಯನ್ನು ಕೊಟ್ಟವನಲ್ಲ. ಈಗ ನೀನು ಕೇಳುವ ಬಡ್ಡಿಯನ್ನು ಸಹ ಸಲ್ಲಿಸಲು ಸಿದ್ಧನಿರುವೆನು. ಇನ್ನೇನಾದರೂ ಇದ್ದರೆ ಹೇಳಿಬಿಡು.

**ಶೂಲಕ್**:— ರಾಮ, ರಾಮ! ನಿಮ್ಮ ಕಡೆಯಿಂದ ಬಡ್ಡಿಯೆ! ಮಹಾರಾಜ್ಞೇ, ಇನ್ನು ಹೇಳುವದೇನು? ಕೇಳುವದೇನು? ನೀವು ಬಹು ನಿಷ್ಠುರವಾದಿಗಳು ನಾನು ಬಾಯಿಸತ್ತವನು. ತಾಳ್ಮೆಯು ನಮ್ಮ ಮಾರವಾಡಿಗಳ ಸ್ವಭಾವವೇ ಆಗಿದೆ. ನೀವು ನನ್ನ ಮೇಲೆ ವಿಷಕಾರುತ್ತಿರುವದನ್ನು ಮರೆತಿರೇನು? ನಾನು ಪೇಟೆಯಲ್ಲಿ ಕಾಲಿಟ್ಟಕೂಡಲೆ, ಅಡಿಗೆಯ ಮನೆಯಲ್ಲಿ ಬಂದ ನಾಯಿಯನ್ನು ಕಂಡವರಂತೆ ನೀವೆಲ್ಲರೂ ಇವನನ್ನೇನು ಹೊಡೆಯಲೋ ಕೊಲ್ಲಲೋ ಎಂದು ಹಲ್ಲು ಮಸೆಯುತ್ತಿದ್ದದ್ದು ಈಗ ನಿಮಗೆ ನೆನಪಾಗಲಿಕ್ಕಿಲ್ಲ! ನೀವು ನನ್ನನ್ನೆಷ್ಟು ಸಾರಿ ಬಹಿರಂಗ ಪ್ರದೇಶಗಳಲ್ಲಿ ಕತ್ತೆ, ನಾಯಿ ಎಂದು ಕರೆದಿಲ್ಲ! ಈಗ ರೂಪಾಯಿಗಳ ಸಲುವಾಗಿ ಕತ್ತೆಯ ಕಾಲನ್ನೇ ಕಟ್ಟಿಕೊಳ್ಳಲು ಬಂದಿರುವಿರಿ. ಆದರೂ, ನಿಮ್ಮ ಮೇಲೆ ನನಗೆ ಎಳ್ಳಷ್ಟಾದರೂ ರೋಷವಾಗಲಿ ದ್ವೇಷವಾಗಲಿ ಇಲ್ಲ. ನಿಮ್ಮ ಸ್ನೇಹದ ದೆಸೆಯಿಂದ ನನ್ನಲ್ಲಿ ಸದ್ಯಕ್ಕೆ ಹಣವಿಲ್ಲದಿದ್ದರೂ ಅನ್ಯತ್ರ ಹೋಗಿ ನಿಮಗೆ ಹಣವನ್ನು ಬಡ್ಡಿಯನ್ನು ಸಹ ತೆಗೆದುಕೊಳ್ಳದೆ ಕೊಡಲು ಸಿದ್ಧನಿರುವೆನು. ಇನ್ನೇನು ಹೇಳಿರಿ?

**ಅನಂತ**: — ಅಹಹ! ಏನು ಧರ್ಮಾತ್ಮನಪ್ಪಾ ನೀನು! ಕಲಿಯುಗದ ಕರ್ಣನು! ಕಾರ್ಯಸಾಧನೆಗಾಗಿ ಕಲಿಪುರುಷನು ಸಹ ಕಣ್ಣೀರು ಸುರಿಸುವಂತೆ, ನಿನ್ನ ಕಾರುಣ್ಯವು ನಮಗೆ ಅದೇ ರೀತಿ ಪರಿಣಮಿಸುವದೋ ಏನೋ ಯಾರು ಕಂಡಿರುವರು! ಶೂಲಕ್‌ಚಂದ, ಈಗಾದರೂ ಏನಾಯಿತು? ನಿನ್ನ ಕೆಟ್ಟ ಕೆಲಸಗಳನ್ನು ನಾವು ಈಗಾದರೂ ನಿಂದಿಸುವವರೇ? ನಮಗೆ ನೀನು ಹಣವನ್ನು ಸ್ನೇಹಭಾವದಿಂದ ಎಂದೆಂದಿಗೂ ಕೊಡಬೇಡ. ಶತ್ರುವಿಗೆ ಸಾಲಕೊಟ್ಟಿರುವೆನೆಂದು ಸಾಲಕೊಡು. ಬೇಕಾದ ಬಡ್ಡಿಯನ್ನು ಹೊರಿಸು. ಬೇಡೆನ್ನುವವರಲ್ಲ. ಇನ್ನೇನು ಹೇಳು?

**ಶೂಲಕ್**:— ಹರೇ ರಾಮ್ ಹರೇ ರಾಮ್! ಎಷ್ಟು ಸಿಟ್ಟಪ್ಪಾ ಶೆಟ್ಟರಿಗೆ! ಜಹಗೀರದಾರರೇ, ನಮಗೆ ಬಡ್ಡಿಯೂ ಬೇಡ, ಭರವಸೆಯೂ ಬೇಡ. ನಿಮ್ಮ ಹೆಸರು

ಸಹ ಬೇಡ. ಒಂದೇ ಮಾತಾಡಿ ಬಿಡ್ತೇನಿ ಸ್ವಾಮಿ, ಸಿಟ್ಟಿಗೇಳಬೇಡಿರಿ. ನಿಮ್ಮ ಸ್ನೇಹಿತರು ನಮ್ಮ ಹಣವನ್ನು ಗೊತ್ತು ಮಾಡಿದ ದಿನದೊಳಗೆ ಖಂಡಿತ ಖಂಡಿತ ಕೊಟ್ಟೇ ತೀರುವೆನೆಂದು ಹೇಳುವದೇನೋ ಹೇಳುತ್ತಾರೆ. ಒಂದು ವೇಳೆ ಅವರು ಹಾಗೆ ಕೊಡದಿದ್ದರೆ, ನಾನು ಕೊಟ್ಟ ಮೂರುಸಾವಿರ ರೂಪಾಯಿಗಳಿಗೆ ಬದಲಾಗಿ ತಮ್ಮ ಹೊಟ್ಟೆಯೊಳಗಿನ ಮೂರು ಸೇರು ಮಾಂಸವನ್ನು ಕೊಡಲೊಪ್ಪುವರೇನೋ ಕೇಳಿ ನೋಡಿರಿ!

**ಅನಂತ**:— ಒಪ್ಪಿದೆನು ! ಇದಕ್ಕೆ ತಪ್ಪಿದವನು ಪಂಚಮಹಾಪಾತಕ ಸಮನು. ಖಂಡಿತವಾಗಿ ಕೊಡುವೆನು. ಬೇಕಾದ ಪ್ರಮಾಣವನ್ನು ಮಾಡಿ ಹೇಳುವೆನು. ತಡವೇತಕೆ? ಕಾಗದವನ್ನು ಬರೆಯಿಸಿರಿ. ಸಾಕ್ಷಿಗಳನ್ನು ಹಾಕಿಸಿರಿ.

**ಶೂಲಕ್**:—ಸಾಕ್ಷಿಯಾತಕ್ಕೆ ಸ್ವಾಮೀ ? ನಾಲಗೆಯೇ ಒಂದು ಪತ್ರ ! ಸೂರ್ಯ ಚಂದ್ರುಮರೇ ಅದಕ್ಕೆ ಸಾಕ್ಷಿ !

**ಅನಂತ**: — ಮಾರವಾಡೀ, ಕೊಟ್ಟ ಮಾತನ್ನು ಹೊರಳಿಸಲು ಇಂತಹ ಕೃತಯುಗದ ಧರ್ಮಗಳನ್ನು ಹೇಳಬೇಡ. ನೀನು ಹೇಳಿದ ಮಾತಿನಂತೆ ಕಾಗದವನ್ನು ಬರೆಯಿಸಿ ದೊಡ್ಡ ಮನುಷ್ಯರ ಸಾಕ್ಷಿಯನ್ನು ರಾಜಕಾರ್ಯಸ್ಥಾನದಲ್ಲಿ ಹಾಕಿಸುವ ನಡೆ.

**ಶೂಲಕ್**: —ತಮ್ಮ ಇಷ್ಟಾನುಸಾರ ನಡೆಯಿಸಿಕೊಳ್ಳಲು ಸಿದ್ಧನೇ ಇರುವೆನು.

**ವಸಂತ**:—ಮಿತ್ರಾ, ವಸಂತಾ, ಇಂತಹ ಜೂಜುಗಾರತನವು ನಮಗೆ ಬೇಡವೇ ಬೇಡ. ಇವನು ಬಲು ಹಟಮಾರಿಯು. ಮುಂದೆ ಪ್ರಮಾದವಾದರೆ ಇವನು ಯಾರಿಗೂ ಮಣಿಯನು.

**ಶೂಲಕ್**:— ಅಬ್ಬಬ್ಬಾ ! ಜಹಗೀರದಾರರೇ, ಆಗಲೇ ಗಾಬರಿಯಾಗಿ ಬಿಟ್ಟಿರೋ ! ನಿಮ್ಮ ಮಾತು ನಿಮಗೆ ಮುಟ್ಟಿತು. ಈಗ ಮಾತು ಹೊರಳಿಸುವವರು ನೀವೋ, ನಾವೋ ? ಮಾತ ಮುರಿಯುವದು ಮುತ್ತ ಒಡೆಯುವದು ಒಂದೇಯೆಂದು ತಿಳಿಯಿರಿ. ಹರೇ ರಾಮ್! ಹರೇ ರಾಮ್! ರಾಯರೇ, ನಿಮ್ಮ ಮನಸ್ಸು ಹೇಗಿದೆಯೆಂಬದು ಈಗ ತಾನೇ ಹೊರಬಿತ್ತಲ್ಲವೇ ? ತಾವು ಕೆಟ್ಟವರಾಗಿದ್ದರೆ ಲೋಕವೆಲ್ಲವೂ ಕೆಟ್ಟದೆಂದೇ ಜನರು ಭಾವಿಸುವರು. ಶ್ರೀಮಂತರೇ, ವಿಚಾರ ಮಾಡಿರಿ. ಶ್ರೇಷ್ಠಿಯವರ ಹೊಟ್ಟೆಯೊಳಗಿನ ಮೂರು ಸೇರು ಮಾಂಸವು ನನಗೆ ಯಾತಕ್ಕೆ ಬರುವದು ? ನೀವು ತಮಾಷೆಯ ಮತುಗಳನ್ನಾಡಿದರೆ, ನಾನೂ ನಿಮ್ಮಂತೆ

ತಮಾಷೆಯ ಮಾತುಗಳನ್ನಾಡಿದೆನು. ಮನುಷ್ಯನ ಮಾಂಸವನ್ನು ಮನುಷ್ಯನು ತಿನ್ನುತ್ತಾನೇನು ? ಇಷ್ಟು ನಂಬಿಕೆ ಇಲ್ಲದಿದ್ದರೆ ನಮಗೇನು ಬೇಕ'. ರೂಪಾಯಿಗ ಳೇನು ಹಾದಿಯ ಮೇಲೆ ಬಿದ್ದಿವೆಯೇನು ? ಬಡ್ಡಿ ಕೊಡಬಾರದು ! ಗಂಟು ಕೇಳ ಬಾರದು ! ಠೀಕ್ ! ಠೀಕ್ !! ಒಳ್ಳೆಯ ವ್ಯವಹಾರವಿದು !!!

**ಅನಂತ**:— ವಯಸ್ಯಾ, ವಸಂತಕುಮಾರಾ, ನಮಗೆ ಅನಾಯಾಸ ವಾಗಿ ಹಣವು ಸಿಗುವ ಸಮಯದಲ್ಲಿ ಇಲ್ಲದ ಆಕ್ಷೇಪಣೆಗಳನ್ನು ತೆಗೆಯಬೇಡ. ಈ ಬಾಯಬಡಕ ಮಾರವಾಡಿಗೆ, ಬಡ್ಡಿಯು ಹೋಯಿತೆಂದು ಆಗಲೆ ಸಂಕಟ ಬಿದ್ದಿರುವದು. ನೀನೆಷ್ಟು ಮಾತ್ರಕ್ಕೂ ಭಯಪಡಬೇಡ. ಬಹಳವಾದರೆ ನನ್ನ ಹಡಗಗಳು ಇನ್ನು ಒಂದೇ ತಿಂಗಳಲ್ಲಿ ಖಂಡಿತವಾಗಿ ತಿರುಗಿ ಬರಬೇಕು. ತಪ್ಪಿದರೆ ಎರಡನೆಯ ತಿಂಗಳಲ್ಲಿಯಂತೂ ಬಂದೇ ತೀರಬೇಕು. ಬಂದ ದಿನವೇ ಮೂರು ಸಾವಿರ ರೂಪಾಯಿಗಳಿಗೆ ಮೂವತ್ತು ಸಾವಿರ ರೂಪಾಯಿಗಳನ್ನಾದರೂ ಕೊಡು ವೆನು. ಬೆದರಬೇಡ, ಬಾ ಹೋಗುವ. (**ಶೂಲಕ್ ಚೇದನಿಗೆ**) ಮಾರವಾಡೀ, ಕಾಗದ ವನ್ನು ಬರೆಯಿಸುವ ನಡೆ. [ಹೋಗುತ್ತಾರೆ.

**ಶೂಲಕ್**:— ಮಹಾರಾಜ ಇಗೋ ಬಂವೆ; ನಡೆಯಿ. ( ತನ್ನಲ್ಲಿ ) ಇನ್ನೇನು ? ಸೆಟ್ಟಿಯು ಸಿಕ್ಕನು !

ಸೆಟ್ಟಿಯು ಬಿದ್ದನು ಬಲೆಯೊಳ್ ।
ನೆಟ್ಟನೆ ಯಮಪುರಿಗೆಯಿವನನಟ್ಟಲು ಭರದಿಂ ।
ದಿಷ್ಟು ಪರಿಯಿಂದ ಯೋಚಿಸಿ ।
ಹೊಟ್ಟೆಯ ಬಗಿಸುವೆನು ದಿಟ್ಟತನದಿಂದಲಿ ನಾಂ ॥

[ ಹೋಗುತ್ತಾನೆ.

**ಗುರು**:—ಅಹಾ ! ಹಸಿದ ಹುಲಿಯ ಬಾಯಿಗೆ ಬಿದ್ದ ಕುರಿಗಳಂತೆ ನನ್ನ ಸ್ನೇಹಿತರಿಬ್ಬರೂ ನಿಷ್ಕರುಣಿಯಾದ ಈ ಕಟಕನ ಬಲೆಯಲ್ಲಿ ಬಿದ್ದರಲ್ಲ ! ಇನ್ನೇನು ಗತಿ ? ನಮ್ಮ ಜನಾಂಗದವರೆಂದರೆ, ಮೊದಲೇ ವಿಷವನ್ನು ಕಾರುತ್ತಿದ್ದ ಈ ಕೃಪ ಣನಿಗೆ ಸಮಯ ಸಿಕ್ಕರೆ ಸಾಕು ! ಮುಂದೆ ಇವರ ಗತಿ ಎಂತಿರುವದೋ ಪರಮೇ ಶ್ವರನೇ ಬಲ್ಲನು ! ತುರುಬೆಯ ಗಿಡಗಳ ಮಧ್ಯದಲ್ಲಿ ತುಳಸಿಯ ಗಿಡ ಹುಟ್ಟಿದಂತೆ ಇಂತಹ ದುಷ್ಟಾತ್ಮನ ಹೊಟ್ಟೆಯಲ್ಲಿ ಬಹು ಕರುಣಾಶಾಲಿನಿಯೂ ನಯವಿನ ಯಾದಿಸುಗುಣಯುತಳೂ ಆದ ಆ ಶಶಿಕಲೆಯು ಹುಟ್ಟಿ ಇವನ ಗೃಹದಲ್ಲಿ ಹೇಗೆ ಕಾಲವನ್ನು ಕಳೆಯುವಳೋ ತಿಳಿಯೆ ! ಅವರವರ ಕರ್ಮಫಲವನ್ನು ಅವರು ಅನುಭವಿಸಲೇ ಬೇಕಲ್ಲವೆ ? [ಹೋಗುತ್ತಾನೆ.

( ತೆರೆಯು ಬೀಳುತ್ತದೆ. )



# ಎರಡನೆಯ ಅಂಕವು



## ೧ನೆಯ ರಂಗ—ಸೌರಾಷ್ಟ್ರಪುರಿಯಲ್ಲಿ ಪ್ರಭಾವತೀದೇವಿಯ ವಸಂತಮಂದಿರ. ಪ್ರಭಾವತಿಯು ವೀಣೆಯನ್ನು ಬಾರಿಸುತ್ತ ಕುಳಿತಿರುವಳು.

( ನರ್ಮದೆಯು ಬರುತ್ತಾಳೆ. )

**ನರ್ಮದೆ:**—ದೇವೀ ! ನೀವು ಹೀಗೆ ಸಂಗೀತವಿನೋದದಲ್ಲಿ ಕುಳಿತುಕೊಂಡರೆ ಮುಂದಿನ ಕಾರ್ಯಗಳು ಹೇಗೆ ನಡೆಯಬೇಕು !

**ಪ್ರಭಾ:**—ನರ್ಮದೇ, ನಿನಗೆ ಸಂಗೀತದ ಅಭಿರುಚಿಯೇ ಇಲ್ಲವೇನು ? ಗಾಯನಕ್ಕೆ ಯಾವನ ಮನಸ್ಸು ಕರಗದೆ ಇರುವದೋ ಅವನು ಶುದ್ಧ ಪಶುವೆಂದು ಶಾಸ್ತ್ರಜ್ಞರು ಹೇಳುವರು. ಗಾಯನಕ್ಕೆ ಸಕಲ ಚರಾಚರವಸ್ತುಗಳು ಮೋಹಗೊಳ್ಳುವವು. ಪಶುಪಕ್ಷಿಗಳು ತಮ್ಮ ಹೊಟ್ಟೆಗೆ ತಿನ್ನುವದನ್ನು ಸಹ ಮರೆತು ರಾಗಾನುಬದ್ಧವಾಗುವವು. ಗಾಯನದ ರುಚಿಯನ್ನರಿಯದವನು ಮೂರ್ಖನೂ, ಪ್ರೇಮರಹಿತನೂ, ದ್ರೋಹಿಯೂ ಆಗಿರುವನೆಂದು ಜ್ಞಾನಿಗಳು ಹೇಳುವರು. ಈ ವಿಷಯವು ಹಾಗಿರಲಿ. ನನ್ನ ಪಾಣಿಗ್ರಹಣಮಾಡುವ ಅಪೇಕ್ಷೆಯಿಂದ ಬಂದ ಈ ರಾಜಕುಮಾರರ ಬಾಧೆಯನ್ನು ನಾನು ತಡೆಯಲಾರೆನು. ಮನಸ್ಸಿಗುಂಟಾದ ಬೇಸರವನ್ನಾದರೂ ನೀಗಿಕೊಂಬುವ ಎಂದಾಲೋಚಿಸಿ ಗಾನವನ್ನು ಮಾಡುತ್ತ ಕುಳಿತುಕೊಂಡೆನು. ಆದರೆ ಇಂದಿನ ದಿನ ಸಾಯಂಕಾಲಕ್ಕಲ್ಲವೇ ಕೆಲವು ರಾಜಕುಮಾರರಿಗೆ ಹೇಳಿ ಕಳುಹಿಸಿದ್ದು ?

**ನರ್ಮದೆ:**—ಈ ದಿನ ನಿಮ್ಮಿಂದ ಆಮಂತ್ರಿತರಾಗಿ ಬರತಕ್ಕವರು ಮೂರು ಜನರು ಮಾತ್ರವೆ. ಅವರಲ್ಲಿ ನಿಮ್ಮ ಕುಲಸ್ವಾಮಿಯ ಚಿತ್ರಪಟವನ್ನು ತೆರೆಯುವ ಭಾಗ್ಯಶಾಲಿಯು ಯಾವನಿರುವನೋ ಏನೋ! ದೇವೀ, ಇದು ಒಳ್ಳೆಯ ಅದೃಷ್ಟಪರೀಕ್ಷೆಯೇ ಆಗಿದೆ ! ಆದರೆ ನಿನ್ನೆ ನಮ್ಮ ಮಂದಿರಕ್ಕೆ ಬಂದ ಆ ಕಾಶ್ಮೀರ ರಾಜಕುಮಾರನು ನಿಮ್ಮ ಮನಕ್ಕೆ ಏನು ಕಾರಣ ಬರಲಿಲ್ಲವೋ ತಿಳಿಯೆ !

**ಪ್ರಭಾ:**— ತಾಯಿ, ಅವನನ್ನು ಏತಕ್ಕೆ ಜ್ಞಾಪಿಸಿದೆ ! ಕಣ್ಣಿಗೆ ಕನ್ನಡಕವನ್ನಿಟ್ಟುಕೊಂಡು ತಲೆ ಕೂದಲು ಕತ್ತರಿಸಿ ಕರಡಿಯಂತೆ ಕಾಣಿಸುತಿದ್ದವನು ನಿನ್ನ ಮನಸ್ಸಿಗಾದರೂ ಹೇಗೆ ಬಂದನೋ ಅರಿಯೆ ?

**ನರ್ಮದೆ:**—ಹಾಗಿದ್ದರೆ, ಬಲು ಸೊಗಸುಗಾರನಂತೆ ಕಾಣುತ್ತಿದ್ದ ಆ ಕೇರಳಾಧಿಪತಿಯ ಪುತ್ರನನ್ನು ಸಹ ನಿರಾಕರಿಸಿದಿರೇತಕೆ ?

**ಪ್ರಭಾ:**—ಬಿಡು, ಬಿಡು ! ಅವನ ಹೆಸರನ್ನೆತ್ತಬೇಡ. ಹೆಂಗೆಳೆಯರಂತೆ ಯಾವಾಗಲೂ ತಲೆಗೆ ಕೇಶರಂಜಿನೀ ಮುಂತಾದ ಸುವಾಸನೆಯ ತೈಲವನ್ನು ಬಳಿದುಕೊಂಡು ದಿನಕ್ಕೆ ಮೂರು ಸಾರಿ ತಲೆಬಾಚಿಕೊಂಬುವವನನ್ನು ಹೆಣ್ಣೆನ್ನಬೇಕೇ ಗಂಡೆನ್ನಬೇಕೇ ? ನೀನೇ ಹೇಳು ! ನೋಡುವವರಿಗೆ ಬ್ರುಹನ್ನಳೆಯ ವೇಷದಂತೆ ಕಂಗೊಳಿಸುತ್ತಿದ್ದ ಅವನನ್ನು ಹೇಗೆ ತಾನೆ ಒಪ್ಪಬೇಕಮ್ಮಾ ! ಅವನಿಗೆ ಬೇಕಾದುದು ಕನ್ನಡಿ, ಹಣಿಗೆ, ಎಣ್ಣೆ, ಇವುಗಳ ಹೊರತು ಅವನು ಹೆಣ್ಣಿಗಾಸೆಬಟ್ಟು ಬಂದವನಂತೆ ತೋರಲಿಲ್ಲ !

**ನರ್ಮದೆ:**—ಹೋಗಲಿ. ಗುರ್ಜರದೇಶದ ಸಾವುಕಾರನ ಮಗನು ಕೂಡ ನಿಮ್ಮ ಮನಸ್ಸಿಗೇಕೆ ಬರಲಿಲ್ಲ ?

**ಪ್ರಭಾ:**—ಅವನನ್ನು ನಾನು ಮನುಷ್ಯಜಾತಿಯಲ್ಲಿ ಗಣಿಸಲೇ ಇಲ್ಲ ! ತನ್ನ ನೆರಳನ್ನು ನೋಡಿ ತಾನೆ ಅಂಜುತ್ತಿದ್ದನು ! ನನ್ನೆದುರಿನಲ್ಲಿ ಬಂದು ನಿಲ್ಲುವದಕ್ಕೆ ನಾಚಿ ನಡುಗುತ್ತಿದ್ದ ಅವನನ್ನು ನಾನು ಹೇಗೆ ತಾನೇ ವರಿಸಬಹುದು ? ಅವನ ಅಳುಮೊಗವನ್ನು ನೋಡುವದಕ್ಕೆ ನನಗಂತೂ ಜುಗುಪ್ಸೆಯಾಗುತ್ತಿತ್ತು. ಅವನನ್ನು ವರಿಸುವವಳು ಕೂಡ ಅವನ ಸಂಗಡ ಅಳುತ್ತಲೆ ಕಾಲವನ್ನು ಕಳೆಯಬೇಕಾಗುವದು ಬಲ್ಲೆಯಾ !

**ನರ್ಮದೆ:**—ಇವನಂತೂ ಹಾಗಿರಲಿ ! ಆ ಪುಣೆ ಪಟ್ಟಣದ ಶ್ರೀಮಂತ ಬಾಬೂರಾಯನ ಮೊಮ್ಮಗನನ್ನು ಏತಕ್ಕೆ ನಿರಾಕರಿಸಿದಿರಿ ?

**ಪ್ರಭಾ:**—ಅಬ್ಬಬ್ಬಾ ! ಅವನ ಹೊರಗಿನ ಅಟ್ಟಹಾಸವನ್ನೂ ಜಂಭವನ್ನೂ, ಅಹಂಕಾರವನ್ನೂ ನೋಡಿದರೆ ಯಾರಾದರೂ ಬೆರಗಾಗುವದೇ ಸರಿ ! ಆದರೆ ಒಳಗೆ ಮಾತ್ರ ಹುರುಡಿಲ್ಲ. ಅವನಿಗೆ ನಿತ್ಯದಲ್ಲಿ ಬೇಕಾಗುವ ಬ್ರಾಂಡಿ, ವ್ಹಿಸ್ಕಿ, ಸೋಡಾ, ಸಿಗರೇಟ, ಬೀಡಿ ಮುಂತಾದವುಗಳಿಗೆ ಕನಿಷ್ಠ ನೂರು ರೂಪಾಯಿಗಳಾದರೂ ದಿನ ಒಂದಕ್ಕೆ ಬೇಕಾಗಬಹುದು ! ಅವನ ದೇಹದ ಮೇಲೆ ಸದಾ ಸ್ಮೃತಿಯೇ ಇರುತ್ತಿದ್ದಿಲ್ಲೆಂಬಂತೆ ತೋರಿತು !

**ನರ್ಮದೆ:**—ತಾಯಿ, ಚಿಂತಿಸಲು ಕಾರಣವಿಲ್ಲ. ಯಾಕಂದರೆ ಇವರಲ್ಲಿ ಒಬ್ಬರಿಗಾದರೂ ನಿಮ್ಮ ತಂದೆಯವರ ಪಣವನ್ನು ಅಂಗೀಕರಿಸುವ ಧೈರ್ಯವಿಲ್ಲವೆಂಬದನ್ನು ನಾನು ಅವರ ಅನುಯಾಯಿಗಳಿಂದ ಸೂಕ್ಷ್ಮವಾಗಿ ಅರಿತಿದ್ದೇನೆ.

**ಪ್ರಭಾ:**—ಸರಿ. ಒಳ್ಳೆಯದಾಯಿತು. ದೇವರಿಗೆ ಕಾಯಿಯನ್ನು ಒಡೆಸುವೆನು.

**ನರ್ಮದೆ:**—ದೇವೀ, ಹಿಂದಕ್ಕೊಮ್ಮೆ ನಿಮ್ಮ ಮನೆಗೆ ಒರ್ವ ತರುಣರು ಬಂದಿದ್ದರಷ್ಟೇ ? ಅವರದು ಯಾವ ಊರು ? ನಿಮಗೆ ನೆನಪಿದೆಯೇನು ?

**ಪ್ರಭಾ:** — (ನೆನಪುಮಾಡಿಕೊಂಡು) ವೇಣುಪುರಿಯವರೇನು ?

**ನರ್ಮದೆ:**—ಅಕೋ, ಅವರೇ ! ಅಹಹಾ ! ಎಂತಹ ಸುಂದರರವರು ! ಏನು ಕಣ್ಣು ! ಏನು ಮೂಗು ! ಎಂತಹ ಮುಖ ! ಎಂತಹ ಬಣ್ಣ !

**ಪ್ರಭಾ:**—ಇದೇನೇ? ಎಷ್ಟು ಸೂಕ್ಷ್ಮವಾಗಿ ನೀನು ಅವರನ್ನು ನಿರೀಕ್ಷಿಸಿದ್ದೀ?

**ನರ್ಮದೆ:**—ಅಪ್ಪನವರೇ, ನನಗೇಕೆ ಅಸ್ನುತ್ತೀರಿ ? ನೀವೇನು ನಿರೀಕ್ಷಿಸಿಲ್ಲವೇ? ನಾನು ಬಾಯಿಂದ ಆಡಿದೆ. ನೀವು ಒಳಗೇ ಇಟ್ಟುಕೊಂಡಿದ್ದೀರಿ; ಇಷ್ಟೇ ! ಅವರು ರೂಪದಲ್ಲಿಯಂತೆ ಗುಣದಲ್ಲಿಯಾದರೂ ಮಿಗಿಲಾದವರಂತೆ ! ಅಲ್ಲವೇ ?

**ಪ್ರಭಾ:**—ಇರಲಿ ಬಿಡೇ ! ಈಗ ಆ ಪ್ರಸ್ತಾವವೇಕೆ ?

**ನರ್ಮದೆ:**—ಏಕೆಂದರೆ ? ನಿಮಗೆ ತಕ್ಕ ವರವೊಂದಿದೆಯೆಂದು ಸೂಚಿಸಿದೆನು; ಅಲ್ಲಲ್ಲ ! ನೆನಪುಮಾಡಿದೆನು.

**ಪ್ರಭಾ:**—ಹೋಗೇ ಯಾಕೆ ಒಟಗುಟ್ಟುವಿ ? ಅವರ ಮೇಲೆ ನನ್ನ ಮನಸ್ಸಿದೆಯೆಂದಾದರೂ ನೀನು ಹೇಗೆ ಗ್ರಹಿಸುವಿ ? ಒಂದು ವೇಳೆ ಇದ್ದರೂ, ನನ್ನ ತಂದೆಯವರ ಪಣವೊಂದಿದೆಯಲ್ಲವೇ ? ಅವರು ಅದಕ್ಕೆ ಒಡಂಬಟ್ಟು ನನ್ನ ಪ್ರಾಪ್ತಿಗಾಗಿ ಯತ್ನಮಾಡಬೇಕಲ್ಲವೇ ?

**ನರ್ಮದೆ:**—ಅದು ಸರಿ. ಆದರೆ ದೇವಿಯವರೇ, ಅವರ ಹೆಸರೇನೆಂದಿರಿ?

**ಪ್ರಭಾ:**— (ಮುಗುಳ್ನಗೆಯಿಂದ) ವ......ಸಂತಕುಮಾರರಲ್ಲೆ ?

**ನರ್ಮದೆ:**—ಓಹೋ, ಅಹುದು, ವಸಂತಕುಮಾರರು ! ಚೆನ್ನಾಗಿ ನೆನಪಿನಲ್ಲಿಟ್ಟಿರುವಿರಿ ? ಮೇಲೆ ಮಾತ್ರ ನನ್ನನ್ನೇ ಕೇಳುತ್ತಾರೆ ಆ ಪ್ರಸ್ತಾವನೇಕೆಂದು ?

**ಪ್ರಭಾ:**—ಸಾಕು ನಿನ್ನ ಹುಡುಗಾಟಿಕೆ ! ಸುಮ್ಮನಿರು !

( ಸೇವಕನು ಬರುತ್ತಾನೆ. )

**ಸೇವಕ:**—ದೇವೀ, ಶ್ರೀಮತ್‌ಕುಮಾರರಿರ್ವರು ನಿಮ್ಮ ದರ್ಶನಾಭಿಲಾಷೆಯಿಂದ ಬಂದು ದ್ವಾರದ ಬಳಿಯಲ್ಲಿ ಕಾದಿರುವರು. ಮುಂದೇನಪ್ಪಣೆ ?

**ಪ್ರಭಾ:**—ನರ್ಮದೇ, ನಾನು ನಿನ್ನಿನ ದಿನ ಹೇಳಿದ ಆ ಆಂಧ್ರರಾಜಕುಮಾರನೂ, ತಮಿಳುರಾಜಕುಮಾರನೂ ಬಂದಂತೆ ತೋರುತ್ತದೆ. ಆಗಲಿ. ಇವ

ರನ್ನು ಪ್ರತ್ಯೇಕ ಪ್ರತ್ಯೇಕವಾಗಿ ಬೇರೆ ಬೇರೆ ಮಾರ್ಗದಿಂದ ಕರೆದು ತಾ. ನಾನೂ ಮುಂದಿನ ಸಿದ್ಧತೆಗೆ ತೊಡಗುವೆನು. ಹೋಗು.

**ಚಂಪಾ**:—ಹಾಗೆಯೇ ಮಾಡುವೆನು. [ಹೋಗುತ್ತಾಳೆ.]



## ೨ನೆಯ ರಂಗ— ಶೂಲಕ್‌ಚಂದನ ಗೃಹ. ಶೂಲಕ್‌ಚಂದನ ಮಗಳು ಆಲೋಚಿಸುತ್ತ ಒಬ್ಬಳೇ ಕುಳಿತಿರುತ್ತಾಳೆ.

**ಶಶಿಕಲೆ**:—ಆಹಾ ! ದೈವವಿಲಾಸಕ್ಕೇನೆನ್ನಬೇಕು ? ಹೆಸರಿಗೇನೋ ಕ್ಷೀರ ಸಾಗರಭಟ್ಟ, ಕುಡಿಯಲು ಒಂದು ಹನಿ ಮಜ್ಜಿಗೆ ಸಹ ಸಿಗಲಾರದೆಂಬ ಮಾತು ನಮ್ಮ ಮನೆಯಲ್ಲಿ ಸತ್ಯವಾಗಿರುವದು. ನವಕೋಟಿನಿಧಿಗಳಿಗೆ ಅಧಿಪತಿ ಎಂದು ಹೆಸರುವಾಸಿಹೊಂದಿದ ಈ ಶೂಲಕ್‌ಚಂದನ ಪುತ್ರಿಯ ದುರ್ದೈವವು ಹೀಗಿರುವದೆಂದು ಯಾರು ತಾನೆ ಬಲ್ಲರು ? ನನ್ನ ತಾಯಿಯು ಸತ್ತಾಗಿನಿಂದ ನನಗೆ ಸುಖವೆಂಬದೇ ಇಲ್ಲದಾಗಿದೆ. ಹಗಲೂ ಇರಳೂ ನನ್ನ ವೃದ್ಧಪಿತನ ಕಟಿಕಟಿಗೆ ಗುರಿಯಾಗುತ್ತಿರುವದೇ ನನ್ನ ಪ್ರಾಪ್ತಿಯಾಗಿದೆ ! ನನ್ನ ತಾಯಿಯ ತೌರುಮನೆಯವರಾರಾದರೂ ಇದ್ದರೆ, ಅಲ್ಲಿಗಾದರೂ ಹೋಗಿ ನಾಲ್ಕು ದಿನ ಕಾಲಕಳೆಯಬೇಕೆಂದರೆ, ಗೃಹಕೃತ್ಯವಿಚಾರಗಳನ್ನು ನೋಡಿಕೊಳ್ಳಲು ಯಾರೂ ಇಲ್ಲವೆನ್ನುವನು. ಸೇವಕಜನರ ಮೇಲಂತೂ ಸ್ವಲ್ಪಾದರೂ ನಂಬುಗೆ ಇಲ್ಲ. ಸೇವಕರ ಮಾತು ಹಾಗಿರಲಿ. ತನ್ನ ಎಡಗೈ ಬಲಗೈಗಳನ್ನೇ ನಂಬದ ಅತನು ಸೇವಕರನ್ನೂ ವಿಲೇಖಕರನ್ನೂ ನಂಬುವನೋ ? ರಾತ್ರಿಕಾಲದಲ್ಲಿಯಂತೂ ಪ್ರತಿನಿತ್ಯ ಜಾಗರವು ! ಹೀಗೆ ಎಷ್ಟು ಕಾಲ ನಡೆಯಬೇಕು ? ನನಗೀಗ ಹದಿನೆಂಟು ವರುಷಗಳು ತುಂಬಿದರೂ ನನ್ನ ವಿವಾಹದ ಪ್ರಸ್ತಾವವೇ ಇಲ್ಲ. ತನ್ನಂತೆ ಮಹಾ ಕೃಪಣಶಿರೋಮಣಿಯಾದ ಒಬ್ಬ ವೃದ್ಧನಾದ ಮಾರವಾಡಿಸಾವುಕಾರನಿಗೆ ನನ್ನನ್ನು ಗಂಟುಹಾಕುವ ಆಲೋಚನೆಯು ಆತನ ಮನದಲ್ಲಿ ಹುಟ್ಟಿದ ಹಾಗೆ ಇದೆ ! ಆದುದರಿಂದಲೇ ಕೇವಲ ಸಾಧುವರ್ತನನೂ ವಯೋರೂಪಗುಣಸಂಪನ್ನನೂ ಆದ ಆ ಗುರುಪ್ರಸಾದನ ಸಂಗಡ ನಾನು ಮಾತನಾಡುವದು ಸಹ ಆಕ್ಷೇಪಕರವಂತೆ ! ಇಂಥ ಪ್ರತಿಬಂಧಕಗಳಿಗೆ ಒಳಪಟ್ಟು ಇಲ್ಲಿರುವದಕ್ಕಿಂತಲೂ ಈ ಮನೆಯನ್ನೇ ಬಿಟ್ಟು, ನನ್ನ ದೂರಬಂಧುಗಳಾರಾದರೂ ಇದ್ದರೆ ಅಲ್ಲಿಗೆ ಹೋಗಿ ಬಿಡುವದು ಲೇಸೆಂದು ತೋರುವದು.

( ಗುರುಪ್ರಸಾದನು ಕಾಗದವನ್ನು ಹಿಡಿದುಕೊಂಡು ಬರುತ್ತಾನೆ )

**ಗುರು:**—ದೇವೀ, ನಿನ್ನ ಜನಕನು ತಾನು ಮನೆಯಲ್ಲಿ ಇಲ್ಲದ ವೇಳೆಯಲ್ಲಿ ನಾನು ನಿನ್ನೊಡನೆ ಸಂಭಾಷಿಸಕೂಡದೆಂದು ಆಜ್ಞಾಪಿಸಿರುವನು. ಆದುದರಿಂದ ಆತನು ಮನೆಯಲ್ಲಿ ಇಲ್ಲದಿದ್ದರೆ ನಾನು ತಿರುಗಿ ಹೋಗಬೇಕಾಗುವದು. ನಿನ್ನ ಪಿತನ ಮನೆಯಲ್ಲಿದ್ದರೆ ನಾನು ಬಂದ ವಾರ್ತೆಯನ್ನು ದಯಮಾಡಿ ತಿಳಿಸುವೆಯಾ ?

**ಶಶಿ:**—ಗುರುಪ್ರಸಾದ, ನಿನ್ನ ಯಜಮಾನನ ಮಾತನ್ನು ನೀನು ನಡೆಯಿಸುವದರಲ್ಲಿ ನನಗೆ ಆವ ಆಕ್ಷೇಪಣೆಯೂ ಇಲ್ಲ! ಆದರೆ ಆತನು ತನ್ನ ಅಂತರಂಗದ ಚಿಕ್ಕ ಮನೆಯಲ್ಲಿ ತನ್ನ ಹಣಕಾಸುಗಳನ್ನು ಎಣಿಕೆ ಮಾಡುತ್ತ ಕುಳಿತಿರುವನು. ನಾನು ಸಹ ಒಳಗೆ ಹೋಗಿ ಮಾತನಾಡುವದಕ್ಕೆ ಅನುಜ್ಞೆಯಿಲ್ಲ. ಆದುವರಿಂದ ಆತನು ಮನೆಯಲ್ಲಿರುವನೆಂದು ಭಾವಿಸಿ, ಆತನು ಹೊರಗೆ ಬರುವವರೆಗೆ ನನ್ನ ಸಂಗಡ ನೀನು ಆವ ಸಂಕೋಚವೂ ಇಲ್ಲದೆ ಧಾರಾಳವಾಗಿ ಮಾತುಗಳನ್ನಾಡಬಹುದು.

**ಗುರು:**—(ತನ್ನಲ್ಲಿ) ನನಗಾವರೂ ಇಷ್ಟೇ ಬೇಕು. (ಪ್ರಕಾಶವಾಗಿ) ದೇವೀ, ನೀನೋ ಶ್ರೀಮಂತನ ಮಗಳು. ನಾನೋ ನಿನ್ನ ತಂದೆಯ ಬಳಿಯಲ್ಲಿ ಸೇವಾವೃತ್ತಿಯಿಂದಿರುವ ಬಡ ವಿಲೇಖಕನು. ಹೀಗಿರುವಲ್ಲಿ ನನ್ನಂಥ ಅಷ್ಟದರಿದ್ರನು ನಿನ್ನಂಥ ಸೌಭಾಗ್ಯವತಿಯೊಡನೆ ಧಾರಾಳವಾಗಿ ಮಾತುಗಳನ್ನಾಡುವದು ಹೇಗೆ ?

**ಶಶಿ:**—ಭದ್ರಾ, ಈ ಲೋಕದಲ್ಲಿ ಯಾರಿಗೂ ಬಡತನವಾಗಲಿ ಸೌಭಾಗ್ಯವಾಗಲಿ ಸ್ಥಿರವಲ್ಲ. ಇಂದು ಲಕ್ಷಾಧೀಶರಾದವರು ನಾಳೆ ಭಿಕ್ಷುಕರಾಗುತ್ತಿರುವದನ್ನು ನಾವು ನೋಡುತ್ತಿರುವೆವು. ಆದುದರಿಂದ ನಮ್ಮಲ್ಲಿ ಇಂತಹ ತಾರತಮ್ಯವನ್ನು ಎಣಿಸಬೇಡ. ಆಲೋಚಿಸಿದರೆ ನನಗಿಂತಲೂ ನೀನೇ ಪುಣ್ಯವಂತನು. ನಿನ್ನಲ್ಲಿರುವ ಸರಲಹೃದಯವನ್ನೂ ಭೂತದಯಾಪಶ್ಚಾತ್ತಾಪಗಳನ್ನೂ ನಾನು ಅನ್ಯರಲ್ಲಿ ಕಾಣಲಿಲ್ಲ. ನನ್ನ ತಂದೆಯ ಸೇವಾವೃತ್ತಿಯಲ್ಲಿದ್ದರೂ, ಆತನು ಹಿಂಸಿಸುವ ಎಷ್ಟೋ ಬಡ ಜನರಿಗೆ ನಿನ್ನ ಕೈಲಾದ ಸಾಹಾಯ್ಯವನ್ನು ನೀನು ನಿತ್ಯದಲ್ಲಿಯೂ ಮಾಡುವದನ್ನು ನಾನೇನು ನೋಡುವದಿಲ್ಲವೆಂದು ತಿಳಿದಿರುವೆಯಾ ?

**ಗುರು:**—ಕೋಮಲಾಂಗೀ, ರಿಕ್ತನೂ, ಅನ್ಯರ ಸೇವಾವೃತ್ತಿಯಲ್ಲಿ ಕಾಲಕ್ಷೇಪವನ್ನು ಮಾಡುವವನೂ ಆದ ನನ್ನಂಥ ಬಡವನಿಂದ ಇತರರಿಗೆ ಉಪಕಾರವು ಹೇಗೆ ಆದೀತು ? ಬಡ ಜನರಿಗೆ ನಿಮ್ಮ ಜನಕನು ಲೇಶವಾದರೂ ಕರುಣೆಯನ್ನು ತೋರಿಸದೆ ಹಿಂಸೆಬಡಿಸುವದನ್ನು ನೋಡಲಾರದೆ ದುಃಖಬಡುವೆನು. ಇದಕ್ಕಿಂತಲೂ ಹೆಚ್ಚಿಗೆ ನಾನೇನು ಮಾಡಬಲ್ಲೆನು ? ನೀನೇ ಹೇಳು !

**ಶಶಿ:**— ಗುರುಪ್ರಸಾದ, ಈ ವಿಷಯದಲ್ಲಿ ನನಗಿಂತಲೂ ಪಾಪಿಷ್ಠರು ಈ ಲೋಕದಲ್ಲಿ ಯಾರೂ ಇಲ್ಲವೆಂದು ತಿಳಿದಿರುವೆನು. ನನ್ನ ಗೃಹವು ಕಟಕನ ವಧ್ಯಸ್ಥಾನಕ್ಕಿಂತಲೂ ನಿಕೃಷ್ಟವಾಗಿ ನನಗೆ ತೋರುವದು. ನಮ್ಮ ಗೃಹದಲ್ಲಿ ನಡೆಯುವ ಸುಳ್ಳುತಂತ್ರಗಳು, ಅಪ್ರಮಾಣಸಾಕ್ಷಿಗಳು, ಮನೆಮುರಕಮಾತುಗಳು ಇವುಗಳನ್ನು ನೋಡಿ ನೋಡಿ ಸಾಕಾಯಿತು! ನಮ್ಮ ತಂದೆಯು ಅನ್ಯಾಯ್ಯವಾಗಿ ಆರ್ಜನೆಮಾಡುವ ಹಣವೆಲ್ಲವೂ ಎಂದಿಗಾದರೂ ಕಳ್ಳರ ಪಾಲೋ ಅಳರಸರ ಪಾಲೋ ಆಗೇ ಆಗಬೇಕು. ನಮ್ಮ ತಂದೆಯು ಬಡ ಜನರಿಗೆ ಕೊಡುವ ಹಿಂಸೆಯನ್ನಂತೂ ನಾನು ಈ ಕಣ್ಣಿನಿಂದ ನೋಡಲಾರೆನು. ಈತನ ಸಲುವಾಗಿ ಎಷ್ಟೆಷ್ಟೋ ಜನರ ಮನೆತನಗಳು ಹಾಳಾಗಿ ಹೋಗಿರುವವು! ಅನೇಕರು ಆತ್ಮವಧೆಯನ್ನು ಮಾಡಿಕೊಂಡಿರುವರು! ಕೆಲವರು ದೇಶಭ್ರಷ್ಟರಾಗಿರುವರು! ನಮ್ಮ ಮನೆಯ ಅಂತರಂಗವನ್ನು ನೀನು ಅರಿತವನೆಂದೇ ನಿನ್ನ ಮುಂದೆ ಇದೆಲ್ಲವನ್ನೂ ಬಿಚ್ಚಿ ಹೇಳಿದೆನು.

**ಗುರು:**—ಕೋಮಲಾಂಗೀ! ನೀನು ಸೂಚಿಸಿದ ಸರಲಹೃದಯವೂ ಸಹಾನುಭೂತಿಯೂ ನನ್ನಲ್ಲಿಗಿಂತಲೂ ನಿನ್ನಲ್ಲಿಯೇ ಹೆಚ್ಚಾಗಿರುವುವೆಂದು ನಾನೆಂದೋ ತಿಳಿದುಕೊಂಡಿರುವೆನು. ಅಹಿಂಸಾಕರವಾದ ಧರ್ಮದ ದೀಕ್ಷೆಯು ನಿಮ್ಮ ಜನಾಂಗದಲ್ಲಿರುವದೆಂದು ನಾನು ನಂಬಿ ನಿನ್ನ ಜನಕನ ಸೇವಾವೃತ್ತಿಯಲ್ಲಿ ಸೇರಿದೆನು; ಆದರೆ ಮೊದಲು ನನಗೆ ನಿನ್ನ ಪಿತನ ಕ್ರೂರಸ್ವಭಾವವು ತಿಳಿದಿದ್ದರೆ ನಾನೆಂದಿಗೂ ಈ ನೀಚಸೇವೆಗೆ ಆಶೆಬಡುತ್ತಿದ್ದಿಲ್ಲ. ನಿಮ್ಮ ತಂದೆಯು ನಿತ್ಯದಲ್ಲಿ ಬಡವರಿಗೆ ಕೊಡುವ ಹಿಂಸೆಗೆ ಸರಿಯಾದ ಪಾಪವು ಈ ಜಗತ್ತಿನಲ್ಲಿ ಬೇರೆ ಇಲ್ಲ! ಇದರಿಂದುಂಟಾಗುವ ಅಗ್ನಿಜ್ವಾಲೆಯಿಂದ ಮನುಷ್ಯನ ಬುದ್ಧಿಯು ಸುಟ್ಟು ಬೂದಿಯಾಗಿ ಹೋಗುವದು! ಅನ್ಯರನ್ನು ಹಿಂಸಿಸುವ ಮನುಷ್ಯನು ಪಶುವಿಗಿಂತಲೂ ಪಶುವಾಗಿರುವನು! ದುಷ್ಟಮೃಗಗಳಿಗಿಂತಲೂ ದುಷ್ಟನಾಗಿ ಪಿಶಾಚಿಯ ಅವತಾರದಂತಿರುವನು! ಆದುದರಿಂದ ಮುಳ್ಳಿನ ಮೇಲೆ ನಿಂತವನಂತೆ ಇರುವೆನು!! ಸ್ವಲ್ಪ ಅನುಕೂಲ್ಯವು ದೊರೆತರೆ, ನಾನು ನಿಮ್ಮ ಜನಕನ ಸೇವಾವೃತ್ತಿಯನ್ನು ಬಿಟ್ಟು, ಎಲ್ಲಿಯಾದರೂ ಬಿಕ್ಷವನ್ನೆತ್ತಿಯಾದರೂ ಉಪಜೀವಿಸಲು ಸಿದ್ಧನಿರುವೆನು.

**ಶಶಿ:**— ಗುರುಪ್ರಸಾದ, ಅನಾಥಳೂ ಅಸ್ವತಂತ್ರಳೂ ಆದ ನನ್ನ ಗತಿಯೇನು ?

**ಗುರು:** — ಶೋಭನಾಂಗೀ, ಲಕ್ಷಾಧೀಶನ ಪುತ್ರಿಯಾದ ನಿನಗೆ ಬಂದ

ತೊಂದರೆಯಾದರೂ ಏನು ? ಇಂದೋ ನಾಳೆಯೋ ನಿಮ್ಮ ತಂದೆಯು ನಿನ್ನನ್ನು ಅನುರೂಪನಾದ ಒಬ್ಬ ಯುವಕನಿಗೆ ಕೊಟ್ಟು ಪರಿಣಯಮಾಡಿದ ಕೂಡಲೇ ನಿನ್ನ ಕಷ್ಟಗಳು ದೂರವಾಗುವವು.

**ಶಶಿ**:— ಅಂತಹ ಪುಣ್ಯವು ನನಗಿದ್ದಂತೆ ತೋರುವದಿಲ್ಲ. ನನ್ನನ್ನು ಹಣವಂತನಾದ ಒಬ್ಬ ಶತವೃದ್ಧನ ಪಾಲುಮಾಡಬೇಕೆಂದು ಆಗಳೆ ನನ್ನ ತಂದೆಯು ನಿರ್ಧಾರಮಾಡಿರುವನು. ಇದಕ್ಕೆ ನಾನು ಸಮ್ಮತಿಸದಿದ್ದರೆ ನನ್ನ ಕನ್ಯಾವಸ್ಥೆಯಲ್ಲಿಯೇ ನಾನು ಮೃತಿಹೊಂದಬೇಕಾಗುವದು. ಆದುದರಿಂದ ನಾನಾದರೂ ವಧ್ಯಸ್ಥಾನದಂತಿರುವ ಈ ಗೃಹವನ್ನು, ಸಂದರ್ಭ ಸಿಕ್ಕ ಕೂಡಲೆ ಬಿಟ್ಟು ನಮ್ಮ ತಾಯಿಯ ಬಂಧುಜನರಿದ್ದಲ್ಲಿಗೆ ಹೋಗಬೇಕೆಂಬುವದೇ ನನ್ನ ಅಭಿಲಾಷೆಯು.

**ಗುರು**:— ಹಾಗಾದರೆ ನಿನ್ನ ಪಿತನು ಮಾಡಿದ ಆಸ್ತಿಯು ಯಾರ ಪಾಲಾಗಬೇಕು ?

**ಶಶಿ**:— ಬಡಜನರನ್ನು ಹಿಂಸಿಸಿ ಸಂಪಾದನೆಮಾಡಿದ ಆಸ್ತಿಯು ಯಾರ ಪಾಲಾದರೇನು? ಎಲ್ಲಿಯಾದರೂ ಹೋಗಿ ಬಡತನದಿಂದ ಜೀವಿಸುವ ಒಬ್ಬ ಉತ್ತಮಪುರುಷನ ಕೈಹಿಡಿದು ಜೀವನವನ್ನು ಸಾಗಿಸಿಕೊಳ್ಳಲಪೇಕ್ಷಿಸುವೆನು. ಜನರ ಹಿಂಸೆಯಿಂದ ಬೆರೆತ ಈ ಸಂಪತ್ತೂ ಈ ಸೌಭಾಗ್ಯವೂ ನನಗೆ ಬೇಡವೇ ಬೇಡ !

**ಗುರು**:—ಮೋಹನಾಂಗಿಯೇ ! ನಮ್ಮಿಬ್ಬರಲ್ಲಿರುವ ತಾರತಮ್ಯಗಳನ್ನು ಮರೆತು, ನಾನು ನಿನ್ನ ಪಿತನ ಲೇಖಕನೆಂಬುವದನ್ನೂ ಮರೆತು, ನನ್ನ ಸ್ಥಾನವನ್ನತಿಕ್ರಮಿಸಿ ಒಂದೆರಡು ಮಾತುಗಳನ್ನಾಡುವೆನು. ಅದು ತಪ್ಪೆಂದು ನಿನ್ನ ಮನಸ್ಸಿಗೆ ತೀಳದರೆ ನನ್ನ ಅಪರಾಧವನ್ನು ಕ್ಷಮಿಸು. ನಾನು ನಿನ್ನ ಜನಕನ ಸೇವಾವೃತ್ತಿಯನ್ನು ಕೈಕೊಂಡ ಮೊದಲು ನನ್ನ ಮನಸ್ಸಿನಲ್ಲಿ ಒಂದು ಅಭಿಲಾಷೆಯು ಹುಟ್ಟಿದೆ. ಅದನ್ನು ಇಂದಿನವರೆಗೂ ಅನ್ಯರಿಗೆ ತಿಳಿಸದೆ ಇದ್ದೆನು. ಇಂದು ನಿನ್ನ ಮುಖದಿಂದ ಹೊರಟ ಕೆಲವು ವಾಕ್ಯಸರಣಿಯಿಂದ ನನ್ನ ಆ ಅಭಿಲಾಷೆಯನ್ನು ನಿನಗೆ ತಿಳಿಸಲು ಧೈರ್ಯವನ್ನು ಹೊಂದಿರುವೆನು. ನನ್ನ ಕೈಗೆ ನಿಲುಕದ ಹಣ್ಣಿಗೆ ಕೈಚಾಚಿರುವುದೇನೋ ನಿಶ್ಚಯವು. ಅದು ದುರಾಶೆಯಾಗಲಿ ಅಥವಾ ನಿರಾಶೆಯೇ ಆಗಲಿ! ಮಾನವನ ಮನೋರಾಜ್ಯದಲ್ಲಿ ಹುಟ್ಟುವ ಬಯಕೆಗಳನ್ನು ತಡೆಯಲು ಯಾರಿಗೂ ಸಾಧ್ಯವಲ್ಲ! ನಾನು ಬಡವನೆಂದೂ ನೀನು ಶ್ರೀಮಂತರ ಮಗಳೆಂದೂ ತಿಳಿದೂ, ನಿನ್ನ ಪ್ರೀತಿಗೆ ನಾನು ಪಾತ್ರನಾಗಬೇಕೆಂಬುವ ಇಚ್ಛೆಯು ಬರಿಯ ಹುಚ್ಚುತನವಲ್ಲವೆ ?

**ಶಶಿ:**— ಆರ್ಯಾ! ನಾನೂ ನನ್ನ ಮನೋಗತವನ್ನು ಅನ್ಯರಿಗೆ ತಿಳಿಸ ಬೇಕೆಂದರೆ ನನಗೆ ಹಿತಚಿಂತಕರಾಗಲಿ ಆಪ್ತರಾಗಲಿ ಯಾರೂ ಇಲ್ಲ. ಸರ್ವವೂ ನನಗೆ ಶೂನ್ಯವಾಗಿ ಇದ್ದದರಿಂದ ನನ್ನ ಹೃದಯವಲ್ಲಿ ಹುಟ್ಟಿದ ದುಃಖಾಗ್ನಿಯು ನನ್ನನ್ನು ಒಳಗೇ ಸುಡುತ್ತಿತ್ತು. ನೀನು ನಮ್ಮ ಮನೆಗೆ ಹೋಗಿ ಬರುವದನ್ನು ಪ್ರಾರಂಭಿಸಿದ ಮೇಲೆ, ನಿನ್ನ ಸದ್ವರ್ತನೆಯನ್ನೂ ಪ್ರಾಣಿಕೋಟಿಗಳಲ್ಲಿ ನೀನು ತೋ ರುತ್ತಲಿದ್ದ ಸಹಾನುಭೂತಿಯನ್ನೂ ನೋಡಿ ನನಗೆ ಕಡು ಹರುಷವಾಗುತ್ತಲಿತ್ತು. ನನ್ನ ತಂದೆಯು ನಿನ್ನಲ್ಲಿ ಕಠಿನತೆವಹಿಸದಿದ್ದರೆ, ಆತನು ನನ್ನ ವಿವಾಹದ ವಿಷಯವಲ್ಲಿ ಪ್ರಸ್ತಾವಮಾಡಿದಾಗ, ನೀನು ಬಡವನಾದರೂ ಪರಮತೀಯನಾ ದರೂ ನಿನ್ನ ಪಾಣಿಗ್ರಹಣಮಾಡುವೆನೆಂದು ನಿರ್ಭಯದಿಂದ ಹೇಳುತ್ತಿದ್ದೆನು.

**ಗುರು:**— (ಶಶಿಕಲೆಯ ಕೈಹಿಡಿದು) ಪ್ರಿಯೇ, ಇಂದಿಗೆ ನಾನು ಧನ್ಯನಾದೆನು. ಭೂಲೋಕದಲ್ಲಿಯೇ ನನಗೆ ಸ್ವರ್ಗದ ಸೌಖ್ಯವು ಸಿಕ್ಕಂತಾಯಿತು. ಹೆಚ್ಚು ಮಾತುಗಳನ್ನಾಡಲು ಇದು ಸಮಯವಲ್ಲ! ಹೆಚ್ಚೇನು? ನಿನ್ನ ಸುಖಕ್ಕಾಗಿ ಅಗ್ನಿ ಪ್ರವೇಶ ಮಾಡೆಂದರೂ ಮಾಡಲು ಸಿದ್ಧನಿರುವೆನು!

**ಶಶಿ:**— ಮನೋಹರಾ! ನಾನಾದರೂ ನನ್ನ ತಂದೆಯು ಮೇಲಿದ್ದ ಅನು ರಾಗವನ್ನು ಬಿಟ್ಟುಕೊಟ್ಟು ಈಗಿಂದೀಗಳೆ ನಿನ್ನ ಹಿಂದೆ ಬರಲು ಸಿದ್ಧಳಿರುವೆನು. ಆತನ ಸೌಭಾಗ್ಯಸಂಪತ್ತುಗಳೆಲ್ಲ ಆತನ ಹಿಂದೆಯೇ ಹೋಗಲಿ! ಒಂದು ಉಟ್ಟ ಬಟ್ಟೆಯ ಸಂಗಡ ಸ್ಮಶಾನಸದೃಶವಾದ ಈ ಮನೆಯನ್ನು ಬಿಟ್ಟು, ಈಗಳೆ ನಿನ್ನನ್ನು ಹಿಂಬಾಲಿಸುವೆನು. ಇದರಿಂದ ಬರುವ ಅನರ್ಥವನ್ನಾಗಲಿ, ಅಪಕೀರ್ತಿಯನ್ನಾಗಲಿ ಅನುಭವಿಸಲು ನಾನು ಸಿದ್ಧಳಿರುವೆನು!

**ಗುರು:**— ಮನೋಹಾರಿಣೀ! ಅಷ್ಟು ಆತುರವು ಬೇಡ. ನಾನು ತಂದಿ ರುವ ಈ ಎರಡು ಪತ್ರಗಳಲ್ಲಿ ಅನರ್ಥದಾಯಕವಾದ ಸಂಗತಿಗಳೇ ಇದ್ದಂತೆ ತೋರುವವು. ಆದುದರಿಂದ ಸಮಯವನ್ನು ನಿರೀಕ್ಷಿಸಿ ಕಾರ್ಯಮಾಡುವಾ! ಹೇಗಾವರೂ ಈ ದಿನ ಸಾಯಂಕಾಲಕ್ಕೆ ನಾನು ನಿಮ್ಮ ಮಂದಿರಕ್ಕೆ ಬರುವೆನು! ಆ ಹೊತ್ತಿಗೆ ಮಾತ್ರ ನೀನು ಸಿದ್ಧಳಾಗಿರು.

( ಒಳಗಿನಿಂದ ಶೂಲಕ್‌ಚಂದನು )

**ಶೂಲಕ್:**— ಯಾರಲ್ಲಿ ಹೊರಗೆ ಕಲಕಲವನ್ನು ಮಾಡುವವರು?

**ಗುರು:**— ಶೆಟ್ಟಿಯವರ ಹೆಸರಿಗೆ ಬಂದ ಕಾಗದಗಳನ್ನು ತಂದಿರುವೆನು.

( ಶೂಲಕ್‌ಚಂದನು ಹೊರಗೆ ಬಂದು ಶಶಿಕಲೆಯನ್ನು ನೋಡಿ )

**ಶೂಲಕ್**:— ಇವನ ಸಂಗಡ ತಲೆ ಹರಟೆಯನ್ನು ಕೊಚ್ಚುತ್ತ ನಿಂತ ಗಯ್ಯಾಳಿಯು ನೀನೇ ಏನು ? ನಡೆ ಒಳಗೆ ! [ **ಶಶಿಕಲೆಯು ಹೋಗುತ್ತಾಳೆ.**

**ಶೂಲಕ್**: – ( **ಗುರುಪ್ರಸಾದವನ್ನು ನೋಡಿ** ) ಅವಳೊಂದಿಗೆ ನೀನು ಖಂಡಿತ ವಾಗಿ ಮಾತನಾಡಕೂಡದೆಂದು ನಾನು ನಿನಗೆ ಹೇಳಿದರೂ ನಿನಗಿಷ್ಟು ಅಲಕ್ಷ್ಯವಲ್ಲವೆ ?

**ಗುರು**:— ಶೆಟ್ಟಿಗಳೇ ! ಇದರಲ್ಲಿ ನನ್ನ ಅಪರಾಧದ ಲೇಶಾಂಶವೂ ಇಲ್ಲ ! ತಾವು ತಮ್ಮ ಮನೆಯಲ್ಲಿ ಇಲ್ಲದಿದ್ದರೆ ನಾನು ಈ ಸ್ಥಳದಲ್ಲಿ ಒಂದು ಕ್ಷಣವಾದರೂ ನಿಲ್ಲುತ್ತಿದ್ದಿಲ್ಲ. ಈ ಪತ್ರಗಳನ್ನು ತಮಗೆ ಜಾಗ್ರತೆಯಿಂದ ತಲ್ಪಿಸಬೇಕೆಂದು ಈಗಳೆ ಹೊರಗೆ ಬಂದ ನಿಮ್ಮ ಪುತ್ರಿಯನ್ನು ವಿಚಾರಿಸಿದೆನು; ಇಷ್ಟೇ. ಬೇರೆ ಯಾವ ಸಂಭಾಷಣವನ್ನೂ ಆಕೆಯ ಸಂಗಡ ನಾನು ಮಾಡಲಿಲ್ಲ.

**ಶೂಲಕ್**:—ಇನ್ನು ಮುಂದಾದರೂ ನನ್ನ ಆಜ್ಞೆಯನ್ನು ಉಲ್ಲಂಘಿಸದಂತೆ ವರ್ತಿಸಬೇಕು. ನೀನು ದುರ್ಲಕ್ಷ್ಯದಿಂದಿದ್ದರೆ, ನಿನ್ನ ಪೂರ್ವದ ಯಜಮಾನನನ್ನು ಸೇರಲು ನಿನ್ನ ಮನೆಯ ದಾರಿಯನ್ನು ಹಿಡಿಯಬೇಕು.

**ಗುರು**:— ಅಪ್ಪಣೆ. ( ತನ್ನಲ್ಲಿ ) ನನ್ನ ಮನೆಯ ದಾರಿಯನ್ನು ನಿನ್ನ ಮಗಳೊಂದಿಗೆ ಹಿಡಿಯುವೆನು.

( ಕಾಗದವನ್ನು ಶೂಲಕ್‌ಚಂದನು ಓದಿ ಮಹಾಸಂತೋಷದಿಂದ )

**ಶೂಲಕ್**:— ಈ ಪತ್ರದ್ವಯದಲ್ಲಿ ಸೂಚಿಸಿದ ವಿಷಯಗಳೆರಡೂ ನಿಶ್ಚಯವಾದರೆ ನನ್ನ ಕುಲಸ್ವಾಮಿಗೆ ಕಾಯಿಕರ್ಪೂರಗಳನ್ನು ಕಳಿಸುವೆನು. ನಿನಗೆ ಬಾಯಿತುಂಬ ಸಕ್ಕರಿಯನ್ನು ಹಾಕುವೆನು.

**ಗುರು**:—ಶೆಟ್ಟಿಗಳೇ, ಮೊದಲು ತಮ್ಮ ಪತ್ರದಲ್ಲಿ ಸೂಚಿತವಾದ ವಿಷಯ ಗಳನ್ನು ಹೇಳಿದರೆ ನನಗೆ ಈಗಳೆ ಮೃಷ್ಟಾನ್ನವನ್ನು ಉಣಿಸಿದಂತಾಗುವದು .

**ಶೂಲಕ್**:— ಹಾಗಾದರೆ ಕೇಳು ! ನನ್ನ ಜಾತಿದ್ವೇಷಿಯಾದ ಅನಂತ ಶ್ರೇಷ್ಠಿಯ ಹಡಗಗಳಂತಹ ಎರಡು ಹಡಗಗಳು ಮೂರು ದಿವಸದ ಕೆಳಗೆ ಕುಮಠಾ ಬಂದರದ ಸಮೀಪದಲ್ಲಿ ಮುಳುಗಿದವೆಂದು ವಾರ್ತೆ ಹುಟ್ಟಿರುವುದಂತೆ. ಆದರೆ ಆ ಹಡಗಗಳು ಆ ಶೆಟ್ಟಿಯ ಹಡಗಗಳೆಂದು ನಿರ್ಧರಿಸಿ ಹೇಳುವದಕ್ಕೆ ಹೆಚ್ಚು ಆಧಾರಗಳು ದೊರೆತಿಲ್ಲವೆಂದು ನಮ್ಮ ಅಡತದಾರನು ಬರೆದಿರುವನು. ಆದುದರಿಂದ ನೀನೇ ಆ ಶೆಟ್ಟಿಯ ಮನೆತನಕ ಹೋಗಿ ಅದರ ನಿಶ್ಚಯತ್ವವನ್ನು ಆತನನ್ನು ಕೇಳದೆ ಇತರರಿಂದ ತಿಳಿದುಕೊಂಡು ಬಾ.

**ಗುರು:** — ಇನ್ನು ನಿಮಗೆ ಸಂತೋಷದಾಯಕವಾದ ಎರಡನೆಯ ವಿಷಯ ವಾವುದು ?

**ಶೂಲಕ್:**— ಅದು ನಮ್ಮ ಗೃಹಕೃತ್ಯಕ್ಕೆ ಸಂಬಂಧಿಸಿದ ವಿಷಯವು.

**ಗುರು:**— ನಾನೂ ಇನ್ನು ಮುಂದೆ ನಿಮ್ಮ ಗೃಹಕೃತ್ಯಕ್ಕೆ ಹೊಂದಿದವನೆಂದು ಭಾವಿಸಬೇಕು.

**ಶೂಲಕ್:**— ಇದು ಅಜಗಜಾಂತರನ್ಯಾಯವು. ನಮ್ಮ ನಿಮ್ಮ ಸ್ಥಿತಿಗಳೂ ಆಚಾರವ್ಯವಹಾರಗಳೂ ಬೇರೆ ಬೇರೆ ಇರುವದರಿಂದ ನೀನು ಹೇಳುವ ಮಾತು ನಡೆಯಲಾರದು. ಅಹಮದನಗರದ ಲಕ್ಷಾಧೀಶನಾದ ವಿರೂಪಚಂದನೆಂಬ ಸಾಹುಕಾರನು ನನ್ನ ಪುತ್ರಿಯನ್ನು ನೋಡಲು ಬರುವನಂತೆ. ನೀನು ಬರುವ ಕಾಲಕ್ಕೆ ನಮ್ಮ ಸ್ನೇಹಿತನಾದ ತೋಡರಮಲ್ಲನ ಮನೆಯಲ್ಲಿ ಯಾರಾದರೂ ಹೊಸಬರು ಬಂದಿದ್ದರೆ ವಿಚಾರಿಸಿಕೊಂಡು ಬಾ.

**ಗುರು:**— ನಾನು ಇಲ್ಲಿಗೆ ಬರುವಾಗಲೇ ತೋಡರಮಲ್ಲನ ಅಂಗಡಿಯ ಮೇಲಿಂದಲೇ ಬಂದೆನು. ಆತನ ಅಂಗಡಿಯಲ್ಲಿ ಒಬ್ಬ ಕಡುವೃದ್ಧನೂ ವಿರೂಪಿಯೂ ಆದ ಮಾರವಾಡಿಯು ಏಕಾಂತವನ್ನಾಡುತ್ತ ಕುಳಿತಿದ್ದನು. ಅವನೇ ನಿಮ್ಮ ಭಾವಿ ಅಳಿಯುದೇವರಾಗಬೇಕೋ ಏನೋ ? ಅವನೇ ನೀವು ಹೇಳುವ ಲಕ್ಷಾಧೀಶನಾಗಿದ್ದರೆ ಅವನಿಗೆ ಮೂರನೆಯ ಮದುವೆಯೋ ನಾಲ್ಕನೆಯ ಮದುವೆಯೋ ಇರಬೇಕು !!

**ಶೂಲಕ್:**—ಒಳ್ಳೆಯದು. ನೀನು ಇಲ್ಲಿಂದ ನಡೆ. ಸುಳ್ಳುಸುದ್ದಿಗಳನ್ನು ಹೇಳುತ್ತ ನಿಲ್ಲಬೇಡ. (ಗುರುಪ್ರಸಾದನು ಹೋಗುತ್ತಿರಲು ಕರೆದು) ಮತ್ತು ನೀನು ಬಂದರೆ ಒಳಗೆ ನುಗ್ಗಿ ನನ್ನ ಮಗಳ ಸಂಗಡ ಆವುದನ್ನೂ ಹೇಳದೆ, ನನ್ನ ಹೆಸರನ್ನೇ ಗಟ್ಟಿಯಾಗಿ ಕರೆಯಬೇಕು. ಇನ್ನು ನಡೆ.

**ಗುರು:**— ಆಗಬಹುದು.

(ಸೇವಕನು ಬರುತ್ತಾನೆ.)

**ಸೇವಕ:** — ಶೆಟ್ಟೀ ಮಹಾರಾಜ, ಈ ಚೀಟಿಯನ್ನು ನಮ್ಮ ಯಜಮಾನರಾದ ತೋಡರಮಲ್ಲ ಶೆಟ್ಟಿಯವರು ಕೊಟ್ಟಿರುವರು.

**ಶೂಲಕ್:**— ( ಓದಿಕೊಂಡು ) ಗುರುಪ್ರಸಾದ, ನೀನು ತೋಡರಮಲ್ಲನ ಮನೆಗೆ ಹೋಗುವ ಅಗತ್ಯವಿಲ್ಲ. ನಾನೇ ಅವರ ಮನೆಯ ಕಡೆಗೆ ಈದಿನ ಸಾಯಂಕಾಲಕ್ಕೆ ಹೋಗುವೆನು.

**ಗುರು**:— ಮತ್ತೂ ಚೆನ್ನಾಯಿತು. (ಮರೆಯಲ್ಲಿ) ನಮ್ಮ ರೊಟ್ಟಿ ತುಪ್ಪದಲ್ಲಿ ಬಿದ್ದಂತಾಯಿತು.



**೩ನೆಯ ರಂಗ**:— **ಪ್ರಭಾವತೀದೇವಿಯ ಮಂದಿರದ ಮತ್ತೊಂದು ಭಾಗ. ಉನ್ನತಾಸನದ ಮೇಲೆ ಗಂಧಪುಷ್ಪಾದ್ಯಲಂಕಾರಗಳಿಂದ ಚಿನ್ನ, ರಜತ, ಮತ್ತು ಸೀಸ ಇವುಗಳ ಭರಣಿಗಳಿರುವವು. ಪ್ರಭಾವತಿಯು ಕುಳಿತಿರುವಳು.**

**ಪ್ರಭಾ**:— ಮೊದಲು ಬರುವಾತನು ಆಂಧ್ರರಾಜಕುಮಾರನಾಗಿರಬೇಕು.

(ಆಂಧ್ರರಾಜಕುಮಾರನು ಪ್ರವೇಶಿಸುತ್ತಾನೆ.)

**ಪ್ರಭಾ**:— ರಾಜಕುಮಾರ ! ನಿಮಗೆ ಸ್ವಾಗತವು. ಇಲ್ಲಿಟ್ಟ ಚಿನ್ನ, ರಜತ ಮತ್ತು ಸೀಸ ಇವುಗಳ ಸಂಪುಟಗಳೊಂದರಲ್ಲಿ ನಮ್ಮ ಕುಲಸ್ವಾಮಿಯ ರೂಪಚಿತ್ರವನ್ನಿರಿಸಿರುವರು. ಅದನ್ನು ನೀವು ತೆಗೆದರೆ ನಾನು ನಿಮ್ಮ ಸತಿಯಾಗಲು ಆವ ಸಂಶಯವೂ ಇರದು. ಆದುದರಿಂದ ನೀವು ಈಗಳೇ ಪ್ರಯತ್ನಿಸಬಹುದು.

**ಆಂಧ್ರ**:— ಓಹೋ ! ಇವೇನೋ ಚಿನ್ನಬೆಳ್ಳಿಸೀಸದ ಸಂಪುಟಗಳು! ಇವುಗಳ ಮೇಲೆ ಏನೇನೋ ಅಕ್ಷರಗಳು ಕೆತ್ತಲ್ಪಟ್ಟಿರುತ್ತವೆ ! ಅವುಗಳನ್ನೋದಿ ನೋಡುವ. (ಪ್ರತಿಯೊಂದರ ಹತ್ತಿರ ಹೋಗಿ) ಈ ಬಂಗಾರದ ಭರಣಿಯ ಮೇಲೆ ಬಹುಜನರು ಬಯಸುವದನ್ನು ನಾನು ಕೊಡುವೆನೆಂದು ಬರೆದಿರುವದು- ಈ ರಜತಪೇಟಿಕೆಯ ಮೇಲೆ ಅವರವರ ಯೋಗ್ಯತೆಯಂತೆ ಅವರವರ ಪ್ರಾಪ್ತಿಯೆಂದಿರುವದು. ಕಷ್ಟಕ್ಕೆ ತಕ್ಕ ಫಲವೆಂದು ಈ ಸೀಸದ ಸಂಪುಟದ ಮೇಲೆ ಬರೆದಿರುವದು. ಆಗಲಿ. ರಾಜಪುತ್ರನಾದ ನಾನು ಎಂದಿಗೂ ಕಷ್ಟಬಡುವವನಲ್ಲವಾದುದರಿಂದ ಈ ಸೀಸದ ಸಂಪುಟದ ಗೊಡವೆಯು ನನಗೆ ಬೇಡವೇ ಬೇಡ. ಇನ್ನು ಚಿನ್ನವಿರಲು ನಾನು ಈ ರಜತವನ್ನೇಕೆ ಬಯಸಲಿ ? ಮೇಲಾಗಿ ಬಹುಜನರು ಬಯಸುವದನ್ನೇ ಈ ಬಂಗಾರದ ಭರಣಿಯು ಕೊಡುವದಂತೆ. ಪ್ರಭಾವತಿಯ ಪಾಣಿಗ್ರಹಣಲಾಭವನ್ನು ಬಹುಜನರು ಬಯಸುವಂತೆ, ನಾನು ಸಹ ಅದನ್ನೇ ಅಪೇಕ್ಷಿಸಿ ಬಂದವನು. ಆದುದರಿಂದ ಈ ಚಿನ್ನದ ಭರಣಿಯನ್ನು ತೆಗೆಯುವೆನು (**ತೆಗೆಯಲು ಒಂದು ಪಿಶಾಚಿಯ ರೂಪವನ್ನು ನೋಡಿ**) ಅಯ್ಯಯ್ಯೋ ! ಇದು ಏನು ದುಷ್ಪ್ರಾಪ್ತಿಯು ! ಇದರಲ್ಲಿಯೂ ಏನನ್ನೋ ಬರೆದಿರುವರು !

**ಬೆಳಕಿಗೆ ಮರುಳಾಗಿ ಬಿರಿಯುದಿರು ಜಾಣ ।**
**ಹುಳಕು ಒಳಗಡಗಿಹುದು ತಿಳಿಯೊ ನೀ ಕೋಣ ॥**

ಇನ್ನು ಇಲ್ಲಿದ್ದರೆ ನಾನು ನಿಶ್ಚಯವಾಗಿ ಕೋಣನೇ ಆಗುವೆನು. [ಹೋಗುತ್ತಾನೆ.]

(ಸರ್ಮದೆಯು ತವಿಳುಂ.ಜನೊಡನೆ ಬರುತ್ತಾಳೆ)

**ನರ್ಮದೆ:**—ರಾಜಕುಮಾರ ! ನಾನು ಹೇಳಿದ ಮೂರು ಸಂಪುಟಗಳು ಇಲ್ಲಿರುವವು ನೋಡಿರಿ ! ಇವುಗಳಲ್ಲೊಂದರಲ್ಲಿರುವ ನಮ್ಮ ದೇವಿಯವರ ಕುಲ ಸ್ವಾಮಿಯ ರೂಪಚಿತ್ರವನ್ನು ನೀವು ಎತ್ತಿ ತೆಗೆದರೆ ನಮ್ಮ ದೇವಿಯು ನಿಮಗೆ ಮಾಲೆಯನ್ನು ಹಾಕುವಳು. ಆದುದರಿಂದ ನೀವು ಪ್ರಯತ್ನಿಸಬಹುದು.

**ತವಿಳು:**—ಓಹೋ, ಈ ಚಿನ್ನದ ಸಂಪುಟದಲ್ಲಿ ಬಹುಜನರು ಬಯಸು ವದು ಸಿಕ್ಕುವದಂತೆ. ನಾನೋ ಸದ್ವಂಶಸಂಭೂತನಾದ ರಾಜಕುಮಾರನಾದುದ ರಿಂದ ಸಾಮಾನ್ಯಜನರ ಸಂಗಡ ಸೇರಕೂಡದು. ಮತ್ತು ಆ ಸೀಸದ ಸಂಪು ಟವನ್ನು ನಮ್ಮಂತಹ ಶ್ರೀಮತ್‌ಕುಮಾರರು ಕೈಯಿಂದ ಸಹ ಮುಟ್ಟಲಾಗದು. ಇನ್ನು ಈ ರಜತಪೇಟಿಕೆಯು ಹೇಳುವಂತೆ ನಮ್ಮ ಯೋಗ್ಯತೆಗೆ ತಕ್ಕ ಪದಾ ರ್ಥವೇ ಸಿಗಬೇಕು. ಮೇಲಾಗಿ ನಮ್ಮ ಯೋಗ್ಯತೆಗೆ ತಕ್ಕ ಪದಾರ್ಥವು ಪ್ರಭಾವತೀ ದೇವಿಯ ಪಾಣಿಗ್ರಹಣವಲ್ಲದೆ ಇನ್ನೇನಿರುವದು ? ಆದುದರಿಂದ ಈ ರಜತದ ಭರ ಣಿಯನ್ನೇ ತೆಗೆಯುವೆನು. (ತೆಗೆಯಲು ಒಂದು ಹುಚ್ಚು ಗೊಂಬೆಯು ಕಾಣುವದು) ಅಹಾ ! ದುರ್ದೈವವೇ ! ಈ ಹೆಣ್ಣಿಗೆ ಮರುಳಾಗಿ ನಾನು ಸಹ ಹುಚ್ಚನಾದೆನು ! ಇಲ್ಲಿ ಬರೆದಿರುವದೇನೋ ಓದುವೆನು.

**ಹೆಣ್ಣು ಹೊನ್ನು ಮಣ್ಣು ನಂಬಿ ಬಣ್ಣಗೆಟ್ಟು ಕೆಡಲಿ ಬೇಡ ।**
**ಸಣ್ಣಬುದ್ಧಿ ಬಿಡುವದಯ್ಯ ಕೇಳು ಮಾನವಾ ॥**
**ಪುಣ್ಯಪಾಪಗಳನು ಅರಿತು ಕಣ್ಣು ತೆರೆದು ಕಾರ್ಯಮಾಡು ।**
**ಗಣ್ಯನಾಗು ಜನರ ನಡುವೆ ಮರುಳು ಮಾನವಾ ॥**

ಇಲ್ಲಿಗೆ ಬಂದದ್ದೇ ನನ್ನದು ಮರುಳುತನವು. ತಡಮಾಡದೆ ನಾನು ಬಂದ ದಾರಿಯು ಹಿಡಿದು ಹಿಂದಿರುಗುವದೇ ಲೇಸು. [ಹೋಗುತ್ತಾನೆ.]

**ನರ್ಮದೆ:**— ದೇವೀ ! ನಿನ್ನ ಇಷ್ಟಾನುಸಾರವಾಗಿ ಇರ್ವರೂ ರಾಜ ಕುಮಾರರು ಸೋತು ತಿರುಗಿದರು. ವಿಖ್ಯಾತನು ನಿನ್ನ ಪ್ರೀತಿಗೆ ಪಾತ್ರನಾದ ವಸಂತಕುಮಾರನು. ಆತನು ಸಹ ನಾಳಿನ ದಿನ ಇಲ್ಲಿಗೆ ಬರುವೆನೆಂದು ಹೇಳಿ ಕಳು ಹಿಸಿರುವನು.

**ಪ್ರಭಾ:**—ಆಗಲಿ! ಮೊದಲು ಈ ಪೀಡೆಗಳೆರಡು ಹೋದರೆ ಸಾಕಾಗಿತ್ತು. ಬಾ ಹೋಗುವಾ. [ಹೋಗುತ್ತಾರೆ.



## ೪ನೆಯ ರಂಗ—ಗುರುಪ್ರಸಾದನು ವೇಷಾಂತರದಿಂದ ಶೂಲಕ್ ಚಂದನ ಮನೆಗೆ ಬರುತ್ತಾನೆ

**ಗುರು:**— (ಬಾಗಿಲವನ್ನು ತಟ್ಟಿ) ಶೆಟ್ಟಿಗಳೇ!

(ಶಶಿಕಲೆಯು ಬರುತ್ತಾಳೆ)

**ಶಶಿ:**— ಸ್ವಾಮೀ, ನೀವಾರು ? ನಿಮ್ಮ ಹೆಸರೇನು ? ನಮ್ಮ ತಂದೆಯು ಮನೆಯಲ್ಲಿಲ್ಲ.

**ಗುರು:**— ಹಾಗಾದರೆ ನಿಮ್ಮನ್ನು ಗುರುಪ್ರಸಾದರು ಕರೆದುಕೊಂಡು ಬರಹೇಳಿದರು. ರಥವು ಸಹ ಸಿದ್ಧವಿರುವದು.

**ಶಶಿ:** — (ಗುರ್ತಿಸಿ ಪ್ರಿಯಾ, ಇದು ಏನು ರೂಪಾಂತರವು ?

**ಗುರು:** — ಪ್ರಾಣೇಶ್ವರೀ, ದೇಶಾಂತರಕ್ಕೆ ಹೋಗುವವರಿಗೆ ರೂಪಾಂತರವು ಬೇಡವೆ ? ತಪತೀನದಿಯನ್ನು ದಾಟಿ ಸೌರಾಷ್ಟ್ರಪುರಿಯನ್ನು ನಾವು ಸೇರಿದ ಕೂಡಲೆ, ಅಲ್ಲಿ ಒಂದು ದೇವಾಲಯದೊಳಗೆ ನಮ್ಮ ಆಪ್ತೇಷ್ಟರೂ ಪುರೋಹಿತರೂ ಕಾದಿರುವರು. ಅಲ್ಲಿ ನಿನ್ನನ್ನು ವಿಧ್ಯುಕ್ತವಾಗಿ ಪರಿಗ್ರಹಿಸಿದ ಅನಂತರ ನಾವಿರ್ವರು ನಮ್ಮ ಪ್ರಿಯಮಿತ್ರನಾದ ವಸಂತಕುಮಾರ ಮತ್ತು ಪ್ರಭಾವತಿ ಇವರ ವಿವಾಹಮಹೋತ್ಸವಕ್ಕೆ ಹೋಗುವ. ನಿನ್ನ ಜನಕನು ಆ ಮುದುಕ ಮಾರವಾಡಿಯ ಸಂಗಡ ಸುಖಗೋಷ್ಠಿಯಲ್ಲಿ ಕುಳಿತಿರುವನು. ತಡಮಾಡಬೇಡ. ಸತ್ವರದಿಂದ ಹೊರಡು.

**ಶಶಿ:** — ಇಂದಿಗೆ ನನ್ನ ತಂದೆಯ ಋಣಾನುಬಂಧನವು ತೀರಿತು. ಹಣದಾಶೆಗೆ ನನ್ನನ್ನು ಒಬ್ಬ ವೃದ್ಧಪಿಶಾಚಿಗೆ ಬಲಿಗೊಡಲು ಆಲೋಚಿಸುವ ಜನಕನ ಗೃಹವು ನನ್ನ ಪಾಲಿಗೆ ಕಟುಕನ ವಧ್ಯಸ್ಥಾನವಲ್ಲದೆ ಬೇರೆ ಅಲ್ಲ ! ಆದುದರಿಂದ ನಾನಾದರೂ ಹೊರಡಲು ಸಿದ್ಧಳಿರುವೆನು. ನನ್ನ ಉಟ್ಟ ವಸನವಲ್ಲದೆ, ಈ ಪಾಪ ಗೃಹದ ಪದಾರ್ಥವಾವುದೂ ಬೇಡ. ಬಾ ಹೋಗುವ. [ಹೋಗುತ್ತಾರೆ.]

(ತೆರೆಯು ಬೀಳುತ್ತದೆ)



# ಮೂರನೆಯ ಅಂಕವು

## ೧ನೆಯ ರಂಗ – ಶೂಲಕ್‌ಚಂದನ ಗೃಹ

**ಶೂಲಕ್**:—(ಆಲೋಚಿಸುತ್ತ) ಏನು ವಿಧಿಯ ಮಾಯೆಯೋ ತಿಳಿಯೆ! ದುರಾತ್ಮನೂ ದುಷ್ಟನೂ ಆದ ಆ ಗುರುಪ್ರಸಾದನು ಮಹಾಸಾಧುವಿನಂತೆ ನಟಿಸಿ ಏನೂ ತಿಳಿವಳಿಕೆಯಿಲ್ಲದ ನನ್ನ ಮಗಳಿಗೆ ಇಲ್ಲದ ದುರ್ಬೋಧನೆಗಳನ್ನು ಮಾಡಿ ಅವಳನ್ನು ಎಲ್ಲಿಗೋ ಓಡಿಸಿಕೊಂಡು ಹೋಗಿರುವನಲ್ಲ! ಇನ್ನೇನು ಮಾಡಲಿ? ಅವಳನ್ನು ಹಿಡಿದು ತರಲು ನನ್ನ ಮಿತ್ರನಾದ ತೋಡರಮಲ್ಲನನ್ನು ಕಳುಹಿಸಿರುವೆನು. ಆ ದುರಾತ್ಮಳು ಅವನ ಕೈಗಾದರೂ ಸಿಕ್ಕುವಳೋ ಇಲ್ಲವೋ! ಅವಳು ತನ್ನ ಸಂಗಡ ಎಷ್ಟು ಧನವನ್ನು ಕದ್ದೊಯ್ದಿರುವಳೋ ತಿಳಿಯೆ. ಅವಳು ಬರಲಿ, ಬಾರದಿರಲಿ! ನನ್ನ ಧನವು ಭದ್ರವಾಗಿದ್ದರೆ ಸಾಕು! ದೇವಾ! ಎಂಥ ವಿಪತ್ತನ್ನು ತಂದುಹಾಕಿದೆ!

(ಶಿಲಾದಿತ್ಯನು ಬರುತ್ತಾನೆ.)

**ಶಿಲಾ**:—ರಾಮ್, ರಾಮ್! ಶೆಟ್ಟೀಮಹಾರಾಜ, ಎಲ್ಲ ಕ್ಷೇಮವೇ? ಮತ್ತೇನು ವಿಶೇಷ?

**ಶೂಲಕ್**:—ವಿಶೇಷವೇನು ಸುಟ್ಟಿತು! ನನ್ನ ಮಗಳು ಓಡಿಹೋದ ಸಂಗತಿಯನ್ನು ತಿಳಿದು ನನ್ನೊಡನೆ ಹಾಸ್ಯಮಾಡಲು ಬಂದಿರುವಿಯೋ? ನಿಮ್ಮೆಲ್ಲರಿಗೆ ಸಂತೋಷವಾಯಿತೇ! ಸ್ವಾಮಿದ್ರೋಹಿಯಾದ ಆ ಗುರುಪ್ರಸಾದನು ಇಂಥ ಘಟಿಂಗನೆಂದು ನನಗೆ ತಿಳಿಯಲಿಲ್ಲ. ಇದಕ್ಕೆ ನೀವೆಲ್ಲರೂ ಒಳಸಂಚಾಗಿದ್ದರೂ ಇರಬಹುದು.

**ಶಿಲಾ**:—ರಾಮ, ರಾಮ, ನಾನು ಆವ ಪಾಪವನ್ನೂ ಅರಿಯೆ! ನಮ್ಮ ಪರಮಮಿತ್ರನಾದ ಅನಂತಶ್ರೇಷ್ಠಿಯ ಹಡಗಗಳ ವಿಚಾರವನ್ನು ತಿಳಿದುಕೊಂಡು ಹೋಗಲು ನಾನು ಬಂದಿರುವೆನು. ನನಗೆ ಇತರಸಮಾಚಾರವಾವುದೂ ತಿಳಿಯದು.

**ಶೂಲಕ್**:—ಆ ಶೆಟ್ಟಿಯ ಹಡಗಗಳು ಬಂದರವನ್ನು ಸೇರಿದವೋ ಮುಳುಗಿದವೋ ನನಗೆ ತಿಳಿಯದು! ಅವು ಮುಳುಗಿದ್ದರೆ ಮಾತ್ರ ನಾನೂ ಮುಳುಗಿದಂತಾಗುವದು. ಪಟ್ಟಣಶೆಟ್ಟಿಯೆಂದು ಜಂಬವನ್ನು ಬಡಿಯುತ್ತಿದ್ದ ಇವನಸೊಕ್ಕು ಇಂದಿಗೆ ಮುರಿದಂತಾಯಿತು. ಇವನ ಉರವಣಿಗೆಯು ನಿಂತಿತು. ಇನ್ನು ಸರಿವರ್ತಕರಲ್ಲಿ ಮುಖವನ್ನೆತ್ತಿಕೊಂಡು ಹೇಗೆ ತಿರುಗುವನೋ ಅರಿಯೆ! ತಾನು ನನಗೆ ಬರೆದು ಕೊಟ್ಟ ಅವಧಿಪತ್ರಕ್ಕೆ ಇನ್ನೇನು ಉತ್ತರ ಕೊಡಬಲ್ಲನು! ನನ್ನ ಕೈಯಲ್ಲಿ ಸಿಕ್ಕ ಬಳಿಕ ತಪ್ಪಿಸಿಕೊಳ್ಳಲು ಮಾರ್ಗವೆಲ್ಲಿರುವದು? ಆಗಲಿ! ಆಗಲಿ!

**ಶಿಲಾ:**— ಹಾಗಾದರೆ ಶೆಟ್ಟಿಯ ಪತ್ರದ ಅವಧಿಯು ಮೀರಿತೆಂದು ಆತನು ಬರೆದುಕೊಟ್ಟಂತೆ ಅವನ ಹೊಟ್ಟೆಯನ್ನು ಬಗಿದು ಕರುಳನ್ನು ಕಿತ್ತಿಸುವ ಆಲೋಚನೆಯುಂಟೇನು ? ಶೆಟ್ಟೀ, ಇಂತಹ ಅಮಾನುಷಕೃತ್ಯದಿಂದ ನಿನಗೇನಾದರೂ ಲಾಭವುಂಟೇನು ?

**ಶೂಲಕ್:** —ಇದರಿಂದ ಅವನ ಮೇಲೆ ನನಗಿರುವ ಅಕ್ಕಸವನ್ನು ತೀರಿಸಿಕೊಳ್ಳುವ ಲಾಭವನ್ನು ಬಿಟ್ಟರೆ ಬೇರೆ ಏನಿರುವದು ? ಇದಕ್ಕಿಂತಲೂ ಸವಿಯಾದ ಪದಾರ್ಥವು ಈ ಲೋಕದಲ್ಲಿ ಯಾವುದೂ ಇಲ್ಲ. ಆ ದಿವಾಳಿಖೋರನು ನನ್ನನ್ನು ಬೀದಿಯಲ್ಲಿ ಕಂಡಹಾಗೆಲ್ಲ ಅವಹೇಲನೆಮಾಡಿ ನನ್ನ ಜಾತಿಯ ಜನರನ್ನೇ ಹೀಯಾಳಿಸುತ್ತಿದ್ದನು. ಈಗ ತನ್ನ ಪತ್ರವನ್ನು ಮತ್ತೊಮ್ಮೆ ಓದಿಕೊಳ್ಳಲಿ. ನಾನು ಬಡ್ಡಿಯ ಮಗನೆಂದು ಅಣಕಿಸುತ್ತಿದ್ದನು. ಈಗಲವನು ತಾನು ಬರೆದುಕೊಟ್ಟ ಪತ್ರವನ್ನು ಮತ್ತೊಮ್ಮೆ ಓದಿಕೊಳ್ಳಲಿ. ಶಿಲಾಜಿತರಾವಜೀ ನಿಮ್ಮಂತೆ ನನಗೆ ಕೈಕಾಲುಗಳಿಲ್ಲವೇ ? ಕಣ್ಣುಮೂಗಿಲ್ಲವೇ ? ನಿಮ್ಮಂತೆ ನಾನು ಹುಳಿ ಉಪ್ಪು ಕಾರಗಳನ್ನು ತಿಂಬುವವನಲ್ಲವೆ ? ನಿಮ್ಮ ಮೈಗೆ ಪೆಟ್ಟು ತಾಕಿದರೆ ನಿಮಗೆ ನೋವು ಆಗುವಂತೆ ನನಗೂ ಆಗುವದಿಲ್ಲವೆ ? ನಮ್ಮ ಕೈಗೆ ನೀವು ಗಾಯಮಾಡಿದರೆ ರಕ್ತವು ಸುರಿಯುವದಿಲ್ಲವೆ ? ನಮಗೆ ವಿಷಕೊಟ್ಟರೆ ನಾವು ಸಾಯುವದೇ ಇಲ್ಲವೆ? ಅಯ್ಯಾ, ಈ ಕಾಲದಲ್ಲಿ ಕಲ್ಲಿನಿಂದ ಒಗೆದವರನ್ನು ಹೂವಿನಿಂದ ಯಾರು ಒಗೆಯುವರು? ನೀನೇ ಹೇಳು. ನೀವು ನಮಗೆ ವಿಷಕೊಟ್ಟರೆ ನಾವೇತಕೆ ಅದೇ ವಿಷವನ್ನು ನಿಮಗೆ ಕೊಡಬಾರದು ? ನೀವು ನಮಗೆ ಕೇಡು ಬಗೆದರೆ ನಾವೇತಕೆ ಅದರಂತೆ ಆಚರಿಸಬಾರದು ? ಮುಯ್ಯಕ್ಕೆ ಮುಯ್ಯ ತೀರಿಸಿಕೊಳ್ಳುವದು ಮನುಷ್ಯಜಾತಿಯ ಸ್ವಾಭಾವಿಕವಾದ ಧರ್ಮವು. ಈ ಮಾರ್ಗವನ್ನು ತೋರಿಸುವವರು ನೀವೇಹೊರತು ನಾವಲ್ಲ. ನೀವು ನಮಗೆ ಕಲಿಸಿಕೊಟ್ಟ ಪಾಠವನ್ನೇ ನಿಮಗೆ ಒಪ್ಪಿಸುವೆವು.

( ಸೇವಕನು ಬರುತ್ತಾನೆ. )

**ಸೇವಕ:** – ಸ್ವಾಮೀ, ನಮ್ಮ ಧನಿಯರಾದ ಅನಂತಶೆಟ್ಟರು ತಮ್ಮನ್ನು ಈ ಕ್ಷಣದಲ್ಲಿ ಕರೆತರಲು ಕಳುಹಿದರು.

**ಶಿಲಾ:**—ಅವರನ್ನೇ ನಾನು ಹುಡುಕುತ್ತ ಇಲ್ಲಿಗೆ ಬಂದೆ; ಬಾ ಹೋಗೋಣ.

[ **ಹೋಗುತ್ತಾರೆ.** ]

**ಶೂಲಕ್:**—ಹೋಗು ಹೋಗು. ನಿಮ್ಮ ಶೆಟ್ಟಿಯ ಕೊರಳಿಗೆ ನಾಲ್ಕು ಮೊಳ ಹಗ್ಗವನ್ನು ಕೂಡ ತೆಗೆದುಕೊಂಡು ಹೋಗು.

( **ತೋದರಮಲ್ಲನು ಬರುತ್ತಾನೆ.** )

**ಶೂಲಕ್**:—ರಾವ್, ರಾವ್ ತೋಡರಮಲ್ಲ, ನನ್ನ ಮಗಳ ವಿಚಾರವೇ ನಾಯಿತು ?

**ತೋಡರ್**:—ಮಿತ್ರಾ, ಈ ಮೂರು ದಿನಗಳಿಂದ ಸುತ್ತುಮುತ್ತಿರುವ ಗ್ರಾಮಗಳನ್ನೆಲ್ಲ ಎಡೆಬಿಡದೆ ಭೇದಿಸಿ ಬಂದೆನು. ಎಲ್ಲಿಯೂ ಅವಳ ಸುಳಿವೇ ಇಲ್ಲ. ಆದರೆ ನಾನು ಹಿಂದಿರುಗಿ ಬರುತ್ತಿದ್ದಾಗ ನಮ್ಮ ತಪತೀನದಿಯ ಆಚೆಯ ದಂಡೆಯ ಮೇಲಿರುವ ಮಾರುತಿಯ ಗುಡಿಯಲ್ಲಿ ಒಂದು ವಿಚಿತ್ರವಾದ ವಿವಾಹವಾಯಿತೆಂದು ಅಲ್ಲಿಯ ಜನರು ಮಾತನಾಡುತ್ತಿರುವುದನ್ನು ಕೇಳಿದೆನು !

**ಶೂಲಕ್**:—ಅದು ಏನು ವಿಚಿತ್ರ ! ನೀನೇನೆಂದು ಕೇಳಿದೆ ?

**ತೋಡರ್**:—ಒಬ್ಬ ಮಾರವಾಡೀ ಕುಲದ ಕನ್ನಿಕೆಯು ಒಬ್ಬ ಕ್ಷತ್ರಿಯ ಯುವಕನ ಪಾಣಿಗ್ರಹಣ ಮಾಡಿದಳಂತೆ !

**ಶೂಲಕ್**:—ಅಯ್ಯೋ ! ಅಯ್ಯೋ ! ನನ್ನ ಕುಲಧರ್ಮವೇ ಹಾಳಾಯಿತು. ನನ್ನ ಮಗಳನ್ನು ಪರಿಣಯವಾಗಲು ಬಂದ ಅಹಮುದನಗರದ ಗೃಹಸ್ಥನನ್ನು ನಾವು ಹಿಂದಕ್ಕೆ ಕಳಿಸುವದು ಹೇಗೆ ? ಅಯ್ಯೋ ವಿಧಿಯೇ, ಆ ಜೈನ ಕನ್ಯೆಯು ನನ್ನ ಮಗಳೇ ಎಂದು ಅನ್ನುವಿಯೋ ?

**ತೋಡರ್** :—ಅದನ್ನು ನಾನು ಹೇಳಲಾರೆನು! ಒಬ್ಬ ಬ್ರಾಹ್ಮಣ ಪುರೋಹಿತನು ಆ ವಧುವನ್ನು ಸಂಘಟನ-ಶುದ್ಧಿಯಿಂದ ಪ್ರಾಯಶ್ಚಿತ್ತವನ್ನು ಕೊಟ್ಟು ಆ ಕ್ಷತ್ರಿಯಯುವಕನಿಂದ ತಾಳಿಯನ್ನು ಕಟ್ಟಿಸಿದನಂತೆ !

**ಶೂಲಕ್** :—ಅಯ್ಯೋ ! ಅವಳ ತಾಳಿಯು ಹರಿಯಲಿ ! ಈ ಬ್ರಾಹ್ಮಣರಾದರೂ ಎಂತಹ ದುರಾತ್ಮರಪ್ಪ ! ಇವರ ಶಾಸ್ತ್ರಗಳು ಕೂಡ ಮೇಣದ ಗೊಂಬೆಗಳಂತೆ ಯಾವುದಕ್ಕಾದರೂ ಸರಿಯಾಗುವವು ! ಶಾಸ್ತ್ರಾಧಾರವು ಸಮುದ್ರಯಾನ, ವಿಧವಾವಿವಾಹಾದಿಗಳಿಗೆ ಇರುವದೆನ್ನುವರು, ಇಲ್ಲವೂ ಎನ್ನುವರು. ಇಂಥವರನ್ನು ಹೇಗೆ ನಂಬಬೇಕು ? ಅಯ್ಯೋ ! ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳೇ ನಂಬಿಗೆಗೇಡಿಯಾಗಿ ನನ್ನನ್ನಿಷ್ಟು ಪರಿ ಗೋಳಾಡಿಸಿದ ಬಳಿಕ ಪರರನ್ನೇತಕೆ ದೂರಬೇಕು?

**ತೋಡರ್** :—ಮಿತ್ರಾ, ಆ ತಪತೀನದಿಯ ತೀರದ ಮೇಲೆ ಪಿನ್ನಂತೆ ನಮ್ಮ ವೇಣುಪುರಿಯ ಪಟ್ಟಣಶೆಟ್ಟಿಯಾದ ಅನಂತಶೆಟ್ಟಿಯು ಗೋಳಾಡುತ್ತಿದ್ದನು!

**ಶೂಲಕ್** :—ಏನು ? ಏನು ? ಅನಂತಶೆಟ್ಟಿಯು ಗೋಳಾಡುತ್ತಿದ್ದನೆ? ಅದು ಯಾಕೆ ? ಯಾಕೆ ಗೋಳಾಡುತ್ತಿದ್ದನು ?

**ತೋಡರ್**:—ಇಂದಿನವರೆಗೂ ಎರಡು ಹಡಗಗಳು ಮಾತ್ರ ಹೋಗಿದ್ದ

ವೆಂದು ಹಾರುಸುದ್ದಿಯನ್ನು ಕೇಳಿದ್ದ ಆ ಶೆಟ್ಟಿಯು ಹಡಗಗಳೆಲ್ಲವೂ ಮುಣುಗಿ ಹೋಗಿ ಅದರ ಸಂಗಡ ಅವನ ಸರ್ವಸ್ವವೆಲ್ಲವೂ ಹಾಳಾಯಿತೆಂದು ಗೋಳಾಡುತ್ತಿದ್ದನು!

**ಶೂಲಕ್**:-ಅಹಹ! ವಯಸ್ಯಾ! ಎಂಥ ಸಂತೋಷಕರವಾದ ವಾರ್ತೆಯನ್ನು ಹೇಳಿದೆಯೋ? ಕೇಡಿನಲ್ಲಿದು ಒಳಿತೇ! ನನಗೆ ಪರಮಾನಂದವಾಯಿತು! ಅಲ್ಲಿ ಇನ್ನೇನಾದರೂ ವಿಶೇಷಗಳನ್ನು ನೋಡಿದ್ದಾಗಲಿ, ಕೇಳಿದ್ದಾಗಲಿ ಇದ್ದರೆ ಹೇಳು.

**ತೋಡರ್** :—ಹೇಳುವದೆಲ್ಲವೂ ಆ ವಿವಾಹವಿಷಯವಾಗಿಯೇ ಇದೆ. ವಸಂತಕುಮಾರನೆಂಬ ಒಬ್ಬ ಶ್ರೀಮತ್ಕುಮಾರನು ಅಲ್ಲಿಗೆ ಬಂದು, ಸಾವಿರಾರು ಬಡಬಗ್ಗರಿಗೆ ಮೃಷ್ಟಾನ್ನವನ್ನು ಹಾಕಿಸುತ್ತಿದ್ದನು. ಇದೆಲ್ಲವೂ ಆ ವಿವಾಹದ ದೆಸೆಯಿಂದೆಂದು ಜನರು ಅವನನ್ನು ಕೊಂಡಾಡುತ್ತಿದ್ದರು. ಈ ದಿನವೂ ಅಲ್ಲಿ ಎಲ್ಲರಿಗೂ ಸಮಾರಂಭದ ಊಟವಂತೆ !

**ಶೂಲಕ್**:—ಅಯ್ಯಯ್ಯೋ ! ನನ್ನ ಮನೆಯಲ್ಲಿದ್ದ ಹಣವನ್ನು ಆ ಚಾಂಡಾಲಿನಿಯು ಲೂಟಿಯ ಮಾಡಿಕೊಂಡು ಹೋಗಿ ಆ ಚಂಡಾಲರಿಗೆ ಕೊಟ್ಟು ಕಂಡ ಕಂಡ ಮುತ್ಯಾಳರಿಗೆ ಉಣಿಸುತ್ತಿರಬಹುದು ! ಅಯ್ಯೋ ! ಕಷ್ಟಾರ್ಜಿತವಾದ ನನ್ನ ಭಂಡಾರವನ್ನೆಲ್ಲ ಈ ಪರಿ ಹಾಳುಮಾಡಬಹುದೆ !

**ತೋಡರ್**:—ಕಷ್ಟಾರ್ಜಿತವೆಂದರೆ ನೆನಪಾಯಿತು ! ಆಶೆಟ್ಟಿಯು ಕಳಕೊಂಡ ಹಣವೆಲ್ಲವೂ ಬಹು ಕಷ್ಟಾರ್ಜಿತವೆಂದು ಅಲ್ಲಿ ನೆರೆದವರೆಲ್ಲ ಪಶ್ಚಾತ್ತಾಪಬಡುತ್ತಿದ್ದರು !

**ಶೂಲಕ್**:—ಆ ಭ್ರಮಿಷ್ಠನಿಗೆ ಕಷ್ಟಾರ್ಜಿತವಾದ ಹಣವೆಲ್ಲಿರುವದು ? ಮುಣುಗಿಹೋದ ಅವನ ಹಡಗಗಳ ಸಂಗಡ ಅವನನ್ನು ಅಧಃಪಾತಾಳಕ್ಕೆ ಒತ್ತಿ ತುಳಿಯುವೆನು. ಮಿತ್ರಾ ! ನೀನು ನೋಡಿದ ಗುಂಪಿನಲ್ಲಿ ವಿಲೇಖಕನಾದ ಗುರುಪ್ರಸಾದನನ್ನೇನಾದರೂ ನೋಡಿದೆಯಾ ?

**ತೋಡರ್**:—ಇನ್ನೊಂದು ಸಣ್ಣ ವಿಷಯವು ಸಹ ನಿನಗೆ ತಿಳಿಸತಕ್ಕದ್ದಿರುವದು. ಈ ಗುರುಪ್ರಸಾದನು ಒಂದೆರಡು ನಾಯಿಯ ಕುನ್ನಿಗಳನ್ನು ಒಬ್ಬ ಹೆಂಗಸಿಗೆ ಕೊಟ್ಟು ಅವಳನ್ನು ಒಂದು ದಿವ್ಯತರವಾದ ರಥದಲ್ಲಿ ಕುಳ್ಳಿರಿಸಿ ಸೌರಾಷ್ಟ್ರಪುರಿಯಲ್ಲಿರುವ ವಸಂತೋದ್ಯಾನದ ಕಡೆ ಕಳುಹಿಸಿದುದನ್ನು ನೋಡಿದವರು ನನಗೆ ಹೇಳಿದರು.

**ಶೂಲಕ್**—ಅಯ್ಯೋ ! ಇಂಥಾ ಕರ್ಣಕಠೋರವಾದ ಸುದ್ದಿಗಳನ್ನು

ಕೇಳಿದರೆ ಹೊಟ್ಟೆಯಲ್ಲಿ ಸಾವಿರ ಚೇಳು ಕಚ್ಚಿದಂತಾಗುವದು. ಈ ಘಟಿಂಗರೇ ಕಲೆತು, ನನ್ನ ಮಗಳನ್ನು ಯಾವನೋ ಒಬ್ಬ ಶ್ರೀಮಂತನಿಗೆ ಮಾರಿಕೊಂಡಿರಬಹುದು. ಒಬ್ಬೊಬ್ಬರಾಟವನ್ನು ಈಗಲೇ ಹೋಗಿ ತಿಳಿಸುವೆನು. ಮೊಟ್ಟಮೊದಲು ಆ ಭಂಡನಾದ ಶೆಟ್ಟಿಯು ಮತ್ತೆಲ್ಲಿಗೂ ಪಲಾಯನವಾಡದಂತೆ ನ್ಯಾಯಾಧಿಪತಿಗಳಿಗೆ ಬಿನ್ನೈಸಿಕೊಂಡು ಅವನನ್ನು ಕಾರಾಗೃಹಕ್ಕೆ ಸೇರಿಸಿ ಬರುವೆನು. [ಹೋಗುತ್ತಾ.]

## ೨ನೆಯ ರಂಗ— ಪ್ರಭಾವತೀದೇವಿಯ ಮಂದಿರ. ಉನ್ನತಾಸನದ ಮೇಲೆ ಗಂಧಪುಷ್ಪಾದ್ಯಲಂಕಾರಗಳಿಂದರ್ಚಿತವಾದ ಬಂಗಾರ ಬೆಳ್ಳಿ ಸೀಸಗಳ ಪೇಟಿಕೆಗಳನ್ನು ಇರಿಸಿರುವರು. ಪ್ರಭಾವತಿಯು ಕುಳಿತಿರುವಳು. ನರ್ಮದೆಯು ವಸಂತಕುಮಾರನನ್ನು ಒಡಗೊಂಡು ಬರುವಳು.

**ಪ್ರಭಾ:**- (ಎದ್ದು ನಿಂತು) ರಾಜಕುಮಾರ! ಇಲ್ಲಿ ಕಾಣುವವೇ ಕನಕ ರಜತ ಮತ್ತು ಸೀಸದ ಪೇಟಿಕೆಗಳು. ಇವುಗಳಲ್ಲೊಂದರಲ್ಲಿ ನಮ್ಮ ಕುಲಸ್ವಾಮಿಯ ಹಾಗೂ ನನ್ನ ಚಿತ್ರಪಟಗಳಿರುವವು. ನೀವು ನಿಶ್ಚಯವಾಗಿ ನನ್ನನ್ನು ಪ್ರೀತಿಸುತ್ತಿದ್ದರೆ ಆ ಚಿತ್ರಗಳಿರುವ ಪೆಟ್ಟಿಗೆಯನ್ನು ಹಿಡಿದು ತೆಗೆಯಿರಿ. ಇಂದು ನಿಮ್ಮ ಮನಸ್ಸು ಚೆನ್ನಾಗಿಲ್ಲದಿದ್ದರೆ ಮುಂದೆ ಎಂದಾದರೂ ಈ ಕಾರ್ಯವನ್ನು ಮಾಡಿ ನನ್ನನ್ನು ಪರಿಗ್ರಹಿಸಬಹುದು. ಇದು ನನ್ನ ಪಿತೃಶಾಸನವು. ನನ್ನ ಅಭಿಲಾಷೆಯೂ, ಪ್ರೇಮವೂ ನಿಮ್ಮಲ್ಲಿ ನೆಲೆಸಿರುವವೇ ಹೊರತು ಅನ್ಯರಲ್ಲಿಲ್ಲ. ಆದರೆ ಪಿತೃವಚನಭ್ರಷ್ಟಳು ಮಾತ್ರ ಆಗಲಾರೆನು !

**ವಸಂತ:**— ಪ್ರೇಯಸೀ ! ಈಪ್ಸಿತಾರ್ಥವನ್ನು ಈಡೇರಿಸಿಕೊಳ್ಳಲು ನಾನು ಆತುರಬಡುತ್ತಿರುವೆನು. ಆದರೆ ನನ್ನಿಂದ ಕಾಲಹರಣ ಮಾತ್ರ ಎಂದಿಗೂ ಆಗಲಾರದು ! ಜಯವೋ ಅಪಜಯವೋ ನನ್ನ ಪ್ರಾಪ್ತಿಯಿದ್ದಂತಾಗಲಿ! ಪ್ರಭಾವತೀದೇವೀ , ನಿಶ್ಚಯವಾಗಿ ನಾನು ಧರ್ಮೈಕಪರನಾಗಿ ಪರನಾರೀಸಹೋದರವ್ರತವನ್ನು ನನ್ನ ಅವಸಾನಕಾಲದ ಪರ್ಯಂತವೂ ಅವಲಂಬಿಸಲು ಬದ್ಧಕಂಕಣನಾಗಿದ್ದರೆ , ನಿನ್ನ ಕುಲಸ್ವಾಮಿಯು ನನಗೆ ಪ್ರಸನ್ನನಾಗಲಿ ! ನಾನು ಅನವರತ ಭೂತದಯಾಪಶ್ಚಾತ್ತಾಪಾದಿಗುಣಗಳುಳ್ಳವನಾಗಿದ್ದರೆ ನಿನ್ನ ಜನಕನು ಏರ್ಪಡಿಸಿದ ನಿಮ್ಮ ಕುಲಸ್ವಾಮಿಯ ರೂಪಚಿತ್ರವು ನನ್ನ ಕೈಸೇರಿ , ನಿನ್ನ ಪಾಣಿಗ್ರಹಣಭಾಗ್ಯವನ್ನು ನೀಡಲಿ! ಜಗದೀಶಾ , ನಿನ್ನ ಮೇಲೆ ನಾನು ಭಾರಹಾಕಿ ನನ್ನ ಪ್ರಿಯತಮಳ ಪ್ರೀತಿಗೆ

ಪಾತ್ರನಾಗಲಿಚ್ಛಿಸುವೆನು! ನಾನು ಇಂದಿನ ವರೆಗೆ ಕಷ್ಟಬಟ್ಟಿವನು! ಮುಂದೆ ಕಷ್ಟಬಡುವವನು! ನನ್ನ ಕಷ್ಟಕ್ಕೆ ತಕ್ಕಫಲವು ಪ್ರಭಾವತಿಯ ಪಾಣಿಗ್ರಹಣವಾಗಿಯೇ ಇರಲಿ. ಇನ್ನು ತಡವೇತಕೆ? ನನ್ನ ಅದೃಷ್ಟಪರೀಕ್ಷೆಯನ್ನು ಮಾಡಿ ಮುಗಿಸುವೆನು!

**ಪ್ರಭಾ:**—ಆಗಲಿ. ತಮ್ಮ ಇಚ್ಛೆಯೇ ನನ್ನ ಇಚ್ಛೆ. ದೇವಾ ! ವಸಂತಕುಮಾರರು ಪಣವನ್ನು ಗೆಲ್ಲುವಂತೆ ಅನುಗ್ರಹಿಸು !

**ವಸಂತ:**—(ಪೆಟ್ಟಿಗೆಗಳ ಹತ್ತಿರ ಹೋಗಿ) ಈ ಲೋಕದಲ್ಲಿ ಮೇಲಿನ ಆಡಂಬರಕ್ಕೆ ಮರುಳಾಗುವವರೇ ಬಹಳ. ಬಂಗಾರದಿಂದುಂಟಾಗುವ ಕೇಡುಗಳು ಬಹಳ. ಇದರಿಂದಲೇ ದ್ರೋಹ ! ಇದರಿಂದಲೇ ಬಡಿದಾಟ! ಇದರಿಂದಲೇ ಬೈದಾಟ ! ಎಲ್ಲ ಪಾಪಗಳಿಗೂ ಮೂಲಸ್ಥಾನವಾಗಿರುವ ಈ ಸುವರ್ಣವನ್ನು ನಾನೇತಕೆ ಸಮೀಪಿಸಲಿ ! ಇನ್ನು ರಜತವೋ ! ಇದರ ಗೊಡವೆಯಂತೂ ಮೊದಲು ಬೇಡ. ನಾಣ್ಯರೂಪವನ್ನು ಕೈಕೊಂಡ ಈ ರಜತವು ಒಬ್ಬನಲ್ಲಿಯಾದರೂ ಶಾಶ್ವತವಾಗಿರುವದು ಕಂಡಿಲ್ಲ ! ಕೇಳಿಲ್ಲ ! ಇಂದು ಲಕ್ಷಾಧಿಕಾರಿಯು ನಾಳಿಗೆ ಭಿಕ್ಷಾಧಿಕಾರಿಯು ! ಆದುವರಿಂದ ಸೀಸವೇ ಲೇಸೆಂದು ನನ್ನ ಬುದ್ಧಿಗೆ ತೋರುವದು. ಇದರಲ್ಲಿರುವ ಮಾರ್ದವಸ್ವಭಾವವು ನನ್ನ ಮನಸ್ಸನ್ನು ಆಕರ್ಷಿಸಿರುವದು! ಇದೇ ನನಗೆ ಶರಣ್ಯವು! ಪ್ರೀತಿಪದಾರ್ಥವು! (ಪೆಟ್ಟಿಗೆಯನ್ನು ತೆರೆದು ದೇವತಾಪಟಕ್ಕೆ ನಮಿಸಿ ಪ್ರಭಾವತಿಯ ಚಿತ್ರಪಟವನ್ನು ಹಿಡಿದು) ಅಹಹ ! ಈ ಸ್ತ್ರೀದೇವತೆಯು ಪ್ರಭಾವತಿಯೋ ಅಪ್ಸರವನಿತೆಯೋ ಕಾಣೆ! ಕಮಲಪತ್ರದಂತಿರುವ ವಿಶಾಲವಾದ ನೇತ್ರಗಳು ! ಸಂಪಿಗೆಯ ತೆನೆಯನ್ನು ಹೋಲುವ ನಾಸಿಕವು ! ಕಳಂಕವಿಲ್ಲದ ಚಂದ್ರಮಂಡಲದಂತೆ ಇರುವ ಸೊಬಗಿನ ಮುಖವು ! ಇವೆಲ್ಲವೂ ಪ್ರಭಾವತೀದೇವಿಗಲ್ಲದೆ ಮತ್ತನ್ಯರಿಗಿರಲಾಗುವದೇ ! ಓಹೋ, ಇದರಲ್ಲಿ ಒಂದು ಲೇಖನವಿದೆ. ಓದಿನೋಡುವ.

[ಓದುತ್ತಾನೆ.

**ದುರಳನಾಗದೆ ಸರಳತನವನು ಬಿಡದಲೆ ।**
**ನೆರೆನಂಬು ದೇವರ ಸತತ ॥**
**ಹೊರಗಿನ ಮಿಂಚಿಗೆ ಸೋಲದೆ ಮನುಜನೆ ।**
**ತಿರುಳಿನಿಂ ಸೊಗವಡೆ ನಿರುತ ॥**

ನಿಜವಾಗಿ ಈ ಬರಹವು ಆದರ್ಶಭೂತವಾದ ಆಯುಷ್ಕ್ರಮಣವನ್ನು ಬೋಧಿಸುತ್ತದೆ. ಈ ದೇವಿಯು ನನ್ನ ಅಂತಹ ಬಾಳುವೆಗೆ ಮಾರ್ಗದರ್ಶಕಳಾಗಲಿ! ದೇವೀ ಧನ್ಯನಾದೆನು! (ಪ್ರಭಾವತಿಯು ಕಡೆಗೆ ಹೊರಳಿ) ಇರಲಿ. ನಾನು ಇಂದಿನ ವರೆಗೆ ಉಪಾಸ

ನೆಗೈದ ದೇವತೆಯು ಪ್ರಸನ್ನಳಾಗಲು ಪ್ರತ್ಯಕ್ಷವಾಗಿರಲು ನಾನು ಈ ನಿರ್ಜೀವ ಚಿತ್ರಪಟವನ್ನೇತಕೆ ವರ್ಣಿಸಲಿ ?

**ಪ್ರಭಾ**:—ಮನೋಹರಾ ! ಇಂದಿಗೆ ನಾನು ಕೃತಾರ್ಥಳಾದೆನು. ಅನುಗೃಹೀತಳಾದೆನು. ಇಂದಿನ ವರೆಗೂ ನನ್ನವಾಗಿದ್ದ ಮನೆ, ಕನಕ, ವಸ್ತ್ರಾಭರಣಗಳು, ರಥತುರಗದಾಸದಾಸೀಜನರು ಮುಂತಾದ ನನ್ನ ಚರಸ್ಥಿರಾಸ್ತಿಗಳೆಲ್ಲ ನಿಮ್ಮವಾದವು. ಇಂದಿನಿಂದ ನನ್ನ ಸ್ವಾಮಿಯು ನೀವೇ ಆದಿರಿ. ಪ್ರಾಣನಾಥ ! ನನ್ನ ತನುಮನೋಧನಗಳನ್ನೆಲ್ಲ ನಿಮಗೆ ಸಮರ್ಪಿಸಿರುವೆನು. (ಮಾಲೆಯನ್ನು ಹಾಕುವಳು)

**ವಸಂತ**:—ಪ್ರಾಣನಾಯಿಕೇ, ನನ್ನನ್ನು ಆನಂದಸಾಗರದಲ್ಲಿ ಮುಳುಗಿಸಿದೆ. ಇನ್ನು ನಿನ್ನ ಪ್ರೇಮಾಲಿಂಗನವನ್ನು ಪಡೆಯಬಹುದೋ ?

**ಪ್ರಭಾ**:—ಮನೋರಮಣಾ ! ಅಗ್ನಿನಾರಾಯಣನ ಸಮ್ಮುಖದಲ್ಲಿ ವಿಧಿಪೂರ್ವಕವಾಗಿ ನನ್ನ ಪಾಣಿಗ್ರಹಣ ಮಾಡುವ ವ್ಯವಸ್ಥೆಯು ಕ್ಷಿಪ್ರದಲ್ಲಿಯೇ ಮಾಡಲ್ಪಡುವದು. ಅಂದಿನ ವರೆಗೆ ನನ್ನ ಕನ್ಯಾವಸ್ಥೆಯನ್ನು ಕಾಪಾಡುವ ಧುರೀಣರು ತಾವಲ್ಲದೆ ಮತ್ತನ್ಯರಾರಿರುವರು ?

**ವಸಂತ**:—ಮಂಗಲಾಂಗೀ! ನಿನ್ನ ಇಷ್ಟದಂತೆ ಜರುಗಲಿ ! ವಿವಾಹಮುಹೂರ್ತದ ಸಮಾರಂಭಕ್ಕೆ, ನನ್ನ ಸ್ನೇಹಿತರೆಲ್ಲ ಬರುವಂತೆ ವಿಜ್ಞಾಪನಾಪತ್ರಿಕೆಗಳನ್ನು ಕಳಿಸುವೆನು. ಪ್ರಭಾವತೀ, ಇನ್ನು ಮಂಗಲವಾದ್ಯಗಳು ಪ್ರಾರಂಭವಾಗಲಿ !

(ತೆರೆಯು ಬೀಳುವದು.)



## ೩ನೆಯ ರಂಗ— ರಾಯವೀದಿ

(ರಾಮಾಜೋಯಿಸ, ಶಂಕರಶಾಸ್ತ್ರಿ, ಮಧ್ವಾಚಾರ್ಯ ಮುಂತಾದ ಬ್ರಾಹ್ಮಣರು ಬರುತ್ತಾರೆ)

**ಶಂಕರ**:—ಅಹಹ ! ಎಂತಹ ಸಮಾರಾಧನೆಯಪ್ಪಾ ಅದು ! ಮೃಷ್ಟಾನ್ನದ ರಾಶಿಯನ್ನು ಮೂಲೆಮೂಲೆಗೆ ಗುಡ್ಡದಂತೆ ಒಟ್ಟಿದ್ದರು. ಭಕ್ಷ್ಯಭೋಜ್ಯಾದಿಗಳಿಗೆ ನೆಲೆಯೇ ಇಲ್ಲ ; ಊಟಕ್ಕೆ ತಕ್ಕ ದಕ್ಷಿಣೆಯೂ ದೊರೆಯಿತು. ಇದರಂತೆ ಏಕಪ್ರಕಾರವಾಗಿ ಬ್ರಾಹ್ಮಣರಿಗೆ ಸಂತರ್ಪಣೆಯು ಈ ವಾರವೆಲ್ಲವೂ ನಡೆಯುವ ಹಾಗಿರುವದಲ್ಲವೇ ?

**ರಾಮಾ**:—ನಾಳಿನ ಪ್ರಾತಃಕಾಲಕ್ಕೆ ಶುಭಮುಹೂರ್ತವು. ತರುವಾಯ ಸಂಭಾವನೆಯು. ಅನಂತರ ದಿವ್ಯಭೋಜನದೊಡನೆ ಎಲ್ಲವೂ ಪರಿಸಮಾಪ್ತವಾಗುವದು.

**ಮಧ್ವಾ:**—ಈ ಶ್ರೀಮಂತಳಾದ ತರುಣೀಮಣಿಯ ವಿವಾಹದಿಂದ ಅವರ ಪುರೋಹಿತರಾದ ನಮ್ಮ ಬಡತನವೆಲ್ಲ ಹಿಂಗಿದಂತಾಯಿತು. ಆದರೆ ಮದು ಮಗನು ಮಾತ್ರ ಅಂತಹ ಧನವಂತನಾಗಿ ತೋರಲಿಲ್ಲ.

**ರಾಮಾ:**—ಆ ಮಾತು ನಾಳಿನಿಂದಿಲ್ಲ. ಈ ವಧೂವರರ ವಿವಾಹದ ಪರಿ ಸಮಾಪ್ತಿಯಾದ ಕೂಡಲೇ ಪ್ರಭಾವತೀದೇವಿಯ ಜನಕನ ಆಸ್ತಿಗೆಲ್ಲ ಈ ವಸಂತ ಕುಮಾರನೇ ಸ್ವಾಮಿಯಾಗುವನು. ಇದರಂತೆ ಆಕೆಯ ಪಿತನ ಮರಣಶಾಸನವೇ ಉಂಟು.

**ಶಂಕರ:**— ಇದು ವಿಹಿತವೇ ಸರಿ. ಈ ವಸಂತಕುಮಾರನಾದರೂ ಉತ್ತಮಗೃಹಸ್ಥನು. ನಿಮ್ಮ ಯಜಮಾನಿನಿಯ ಪಾಣಿಗ್ರಹಣ ಮಾಡಲು ಸರ್ವ ವಿಧದಿಂದಲೂ ತಕ್ಕವನಾಗಿಯೇ ಇರುವನು.

**ಮಧ್ವಾ:**—ಶಾಸ್ತ್ರಿಗಳೇ, ಈವಧೂವರರ ಗ್ರಹಕೃತ್ಯವಿಚಾರವು ನಮಗೇ ತಕ್ಕೆ? ನಮಗೆ ಬೇಕಾದುದು ತುಷ್ಟಿಭೋಜನವು. ಇಷ್ಟಪೂರ್ತಿಸಂಭಾವನೆಯು. ಇಷ್ಟಾದರೆ ನಮ್ಮ ಕಾರ್ಯವು ತೀರಿತು. ಸುಮ್ಮನೆ ಇಲ್ಲಿ ನಿಲ್ಲುವದಕ್ಕಿಂತಲೂ ವಿವಾಹಮಂದಿರದ ಕಡೆಗೆ ಹೋಗಿ ಈ ದಿನದ ಭೋಜನದ ವ್ಯವಸ್ಥೆಯನ್ನಾದರೂ ತಿಳಿದುಕೊಂಡು ಬರುವಾ; ನಡೆಯಿರಿ.

**ರಾಮಾ:**— ತಿಳಿದುಕೊಂಬುವದೇನಿದೆ ? ಎಂದಿನಂತೆ ಈ ದಿನವೂ ಹಾಲು ತುಪ್ಪದ ಕಾಲಿವೆಗಳು ಹರಿದೇ ಹರಿಯುವವು. ಬೇಕಾದ ಪಕ್ವಾನ್ನವೂ ಪಂಚ ಭಕ್ಷ್ಯಪರಮಾನ್ನವೂ ಸಿದ್ಧವೇ ಇರುವವು ; ನಿಮಗೆ ಬೇಕಾದುದನ್ನು ಸ್ವೀಕರಿಸ ಬಹುದು, ಬೇಡವಾದುದನ್ನು ಬಿಡಬಹುದು. ವೈವಾಹಿಕಮಂಡಪದ ಶೃಂಗಾರ ವನ್ನು ತೋರಿಸುವೆನು ಬನ್ನಿ. [ಹೋಗುತ್ತಾರೆ.



**೪ನೆಯ ರಂಗ--ಪ್ರಭಾವತೀವಸಂತಕುಮಾರರು ವಸ್ತ್ರಾಭರಣಾ ದ್ಯಲಂಕಾರಯುತರಾಗಿ ವೈವಾಹಿಕವೇದಿಕೆಯ ಮೇಲೆ ಕುಳಿತಿರುತ್ತಾರೆ ಬ್ರಾಹ್ಮಣರು ಮುತ್ತೈದೆಯರು ಮುಂತಾದ ಪ್ರೇಕ್ಷಕರು ನಿಂತಿರುತ್ತಾರೆ.**

( ಆ ಸಮಯದಲ್ಲಿ ವಿವಾಹ ಮಂಡಪದ ಬಳಿಯಲ್ಲಿ ಗುರುಪ್ರಸಾದನು ತನ್ನ ಮಡದಿಯಾದ ಶಶಿಕಳೆಯನ್ನು ಒಡಗೂಡಿ ಬರುವನು )

**ವಸಂತ:**— (ಅವರನ್ನು ನೋಡಿ) ಓಹೋ, ಒಳ್ಳೆಯ ಸಮಯಕ್ಕೆ ಬಂದಿರಿ. ನಿನಗೂ ನಿನ್ನ ಕುಟುಂಬಿನಿಗೂ ಸ್ವಾಗತವು ? ನಮ್ಮ ಪರಮಮಿತ್ರನಾದ ಅನಂತ

ಶ್ರೇಷ್ಠಿಯು ಇದುವರೆಗೆ ತಡೆದು ನಿಂತ ಕಾರಣವು ಮಾತ್ರ ತಿಳಿಯಲಿಲ್ಲ. ನೀವು ಇರ್ವರೂ ವರನ ಕಡೆಯವರಾದುದರಿಂದ ಬಂದ ಸದ್ಗೃಹಸ್ಥರಿಗೆಲ್ಲ ಅತಿಥಿಸತ್ಕಾರಗಳನ್ನು ಮಾಡಿ ಉಪಚರಿಸುತ್ತಿರಬೇಕು.

**ಗುರು:**— ಅದೇ ಕಾರ್ಯವನ್ನೇ ನಾವು ಈಗಳೆ ಕೈಕೊಳ್ಳುವೆವು.

**ವಸಂತ:**— ಪ್ರಿಯೇ, ನನ್ನ ಮಿತ್ರನ ಚದುರೆ ಮಡದಿಯೆಂದು ನಿನ್ನ ಮುಂದೆ ಹೇಳುತ್ತಿದ್ದೆನಷ್ಟೇ? ಅವಳೇ ಈ ಶಶಿಕಲಾದೇವಿಯು! ಪರಾಮರಿಕೆ ಮಾಡು.

**ಪ್ರಭಾ:**— ಶಶಿಕಲಾದೇವೀ, ನಿನ್ನ ಸಂಗತಿಯನ್ನೆಲ್ಲ ಕೇಳ್ದರಿತಿರುವೆನು. ನಿನ್ನ ಪ್ರಾಣಪತಿಯು ಇವರಿಗೆ ಹೇಗೋ, ಹಾಗೆಯೇ ನಾನು ನಿನಗೆಂದು ತಿಳಿ. ಒಳ್ಳೆಯ ಸಮಯಕ್ಕೆ ಬಂದಿರಿ. ಒಳಿತಾಯಿತು.

**ಶಶಿಕಲೆ:**— ಪ್ರಭಾವತೀದೇವೀ, ನಮ್ಮ ನಿಮ್ಮಲ್ಲಿ ಇನ್ನು ಭೇದವೆಲ್ಲಿ ಉಳಿಯಿತು? ಎಲ್ಲರೂ ಒಂದೇ ಮನೆಯವರೇ. ಆದದರಿಂದ ಈ ಔಪಚಾರಿಕ ಮಾತುಗಳೇಕೆ?

**ಬ್ರಾಹ್ಮಣರು:**— ತ್ವರೆಮಾಡಿರಿ. ಲಗ್ನವೇಲೆಯು ಸಮೀಪಿಸಿತು.

**लक्ष्मीर्यस्य परिग्रहः कमलभूस्सूनुर्गरुत्मान्रथः ॥**
**पौत्रौ चद्र विभीषणौ सुरगुरुः शेषः स शय्यासनम् ॥**
**ब्रह्माडं वरमन्दिरं सुरगणा यस्य प्रभोः सेवकाः ।**
**स त्रैलोक्यकुटुंबपालनपरः कुर्यात् सदा मंगलं ॥**

ಸುಮುಹೂರ್ತೇ ಸಾವಧಾನಾ. (**ಎಲ್ಲರೂ ಅಕ್ಷತೆಯನ್ನು ವಧೂವರರ ತಲೆಯ ಮೇಲೆ ಹಾಕುತ್ತಾರೆ.**)

**ರಾಮಾ**— ಈಗ ವಿವಾಹಕಾರ್ಯವೇನೋ ಮುಗಿದಂತಾಯಿತು. ಇನ್ನು ನಮ್ಮ ಶ್ರೀಮಂತರ ಮನೆತನದ ಲೌಕಿಕಪದ್ಧತಿಗಳು ನಡೆಯಬೇಕು. ಮೊದಲು ವಧೂವರರು ತಮ್ಮ ಕೊರಳಲ್ಲಿರುವ ಮಾಲೆಗಳನ್ನು ಅದಲು ಬದಲು ಮಾಡಬೇಕು. ಅನಂತರ ಅಂಗುಲೀಯಕಪ್ರದಾನವು ಜರುಗತಕ್ಕದ್ದು. ಜಹಗೀರದಾರರು ತಮ್ಮ ಕೊರಳಲ್ಲಿರುವ ಪುಷ್ಪದಾಮವನ್ನು ತಮ್ಮ ಪತ್ನಿಯ ಕೊರಳಿಗೆ ಹಾಕಿ, ತಮ್ಮ ಕರಾಂಗುಲೀಯಕವನ್ನು ಅವರ ಬೆರಳಿಗಲಂಕರಿಸಬೇಕು. ಪ್ರಭಾವತೀದೇವೀ, ನೀವು ನಿಮ್ಮ ಕೊರಳಲ್ಲಿರುವ ಮಾಲೆಯನ್ನು ನಿಮ್ಮ ಯಜಮಾನರ ಕೊರಳಿಗಲಂಕರಿಸಿ ನಿಮ್ಮ ಕರಾಂಗುಲೀಯವನ್ನು ಅವರ ಬೆರಳಲ್ಲಿಡಿರಿ. (**ಅದರಂತೆ ಮಾಡುತ್ತಾರೆ.**)

ಇನ್ನು ಆರತಿ ಅಕ್ಷತೆಗಳು ನಡೆಯಲಿ. ನಾಗಸ್ವರವು ಪ್ರಾರಂಭವಾಗಲಿ. [ ನಾಗಸ್ವರ.

( ಶಿಲಾದಿತ್ಯನು ಬರುತ್ತಾನೆ.)

**ಶಿಲಾ:** – (ಆತುರದಿಂದ) ಜಹಗೀರದಾರರಿಗೆ ಜಯವಾಗಲಿ. ತಮ್ಮ ಮಿತ್ರನಾದ ಅನಂತಶ್ರೇಷ್ಠಿಯು ತಮಗೆ ಈ ಪತ್ರಿಕೆಯನ್ನು ಕೊಟ್ಟು, ತಮ್ಮ ವೈವಾಹಿಕ ಉತ್ಸವವು ಭಂಗವಾಗದಿದ್ದರೆ ತಮ್ಮನ್ನು ಆತನ ಬಳಿಗೆ ಕರೆತರುವದೆಂದು ನನ್ನನ್ನು ಕಳುಹಿಸಿದ್ದಾನೆ.

**ವಸಂತ:**––ಶಿಲಾದಿತ್ಯಾ, ನಮ್ಮ ಮಿತ್ರನಿಗೆ ಕ್ಷೇಮವಷ್ಟೆ? ಮತ್ತೇನಾದರೂ ವಿಶೇಷಗಳಿದ್ದರೆ ಹೇಳಿಬಿಡು ?

**ಶಿಲಾ:**— ಅನಂತಶ್ರೇಷ್ಠಿಯ ದೇಹಾರೋಗ್ಯಕ್ಕೆ ಇಂದಿನವರೆಗೂ ಆವ ಕೊರತೆಯೂ ಬಂದಿಲ್ಲ ! ಇನ್ನು ಮನದ ಪರಿಸ್ಥಿತಿಯು ಪತ್ರಿಕೆಯನ್ನು ವಾಚಿಸಲು ವಿಶದವಾಗಬಹುದು.

(ವಸಂತಕುಮಾರನು ಕಾಗದವನ್ನೋದುತ್ತಿರಲು ಪ್ರಭಾವತಿಯು ಅವನನ್ನು ನೋಡಿ)

**ಪ್ರಭಾ:**––(ಮರೆಯಲ್ಲಿ) ನನ್ನ ಪ್ರಾಣನಾಥನ ಮುಖಭಾವವನ್ನು ನೋಡಲು ಆತನ ಪ್ರೀತಿಪಾತ್ರರಾರೋ ಗತಿಸಿಯಾದರೂ ಇರಬೇಕು, ಇಲ್ಲದಿದ್ದರೆ ಮಹತ್ತರವಾದ ಅಪರಾಧಕ್ಕಾವರೂ ಅವರು ಗುರಿಯಾಗಿರಬೇಕು ಎಂದು ತೋರುತ್ತದೆ. ಅಯ್ಯಯ್ಯೋ ! ಕಣ್ಣೀರನ್ನು ಸುರಿಸುವ ಸಂತಾಪವೆಂತಹದಿರಬಹುದು ?

**ವಸಂತ**––(ತಾನು ಓದಿಕೊಂಡು ಕಾಗದವನ್ನು ಪ್ರಭಾವತಿಯ ಕೈಯಲ್ಲಿ ಕೊಟ್ಟು) ಹಾ ! ಪ್ರಾಣಸಖಾ, ಹಾ ! ಅನಂತಶ್ರೇಷ್ಠೀ! ಇನ್ನೇನು ಮಾಡಲಿ ? ಆ ದುರಾಚಾರಿಯ ಬಲೆಯಿಂದ ನಿನ್ನನ್ನು ಹೇಗೆ ಬಿಡಿಸಲಿ ? ಪ್ರಾಣನಾಯಿಕೇ ! ನಾನು ಏನೆಂದು ಹೇಳಲಿ ? ನನ್ನ ಬಾಲ್ಯಸ್ನೇಹಿತನೂ, ನಮ್ಮಿರ್ವರ ಪ್ರೇಮಬಂಧನಕ್ಕೆ ಕಾರಣಭೂತನೂ, ಈ ಪುರಿಯ ಸಮಸ್ತಪ್ರಜರಿಗೆ ಪರಮಪ್ರೀತಿಪಾತ್ರನೂ, ಸಕಲ ಸುಗುಣಗಣೋಪೇತನೂ ಆದ ಅನಂತಶ್ರೇಷ್ಠಿಯೆಂಬ ನನ್ನ ಪ್ರಾಣಸ್ನೇಹಿತನು ಈಗ ಮಹತ್ತರವಾದ ಆಪದಕ್ಕೆ ಗುರಿಯಾಗಿರುವನು; ಇವನ ದುಃಖಕ್ಕೆ ನಾನೇ ಮೂಲವು. ಈ ಪತ್ರಿಕೆಯನ್ನು ಓದು ಅಂದರೆ ಎಲ್ಲವೂ ವಿಶದವಾಗುವದು.

(ಪ್ರಭಾವತಿಯು ಪತ್ರಿಕೆಯನ್ನು ಓದುತ್ತಿರಲು ವಸಂತಕುಮಾರನು ಶಿಲಾದಿತ್ಯನನ್ನು ಕುರಿತು)

**ವಸಂತ:**––ಮಿತ್ರಾ, ಶಿಲಾದಿತ್ಯಾ! ನಮ್ಮ ಮಿತ್ರನನ್ನು ಆ ಕಟಕ ಮಾರವಾಡಿಯ ಸೆರೆಯಿಂದ ತಪ್ಪಿಸುವದಕ್ಕೆ ಯಾವ ಸಾಧನೆಯೂ ದೊರೆಯಲಿಲ್ಲವೇ ?

**ಶಿಲಾ:** –ರಾಜಕುಮಾರ ! ದೈವವೇ ಮುನಿದ ಬಳಿಕ ಆರ ಪ್ರಯತ್ನದಿಂದೇನಾಗಬಲ್ಲದು ? ಮಾಡಿದುದೆಲ್ಲವೂ ಅನರ್ಥಸಾಧನೆಯೇ ಆಯಿತು ! ಮನು

ಷ್ಯಾಕೃತಿಯಿಂದಿರುವ ಆ ರಾಕ್ಷಸ ಮಾರವಾಡಿಯು ನಮ್ಮ ಮಿತ್ರನ ಮಾಂಸಕ್ಕಾಗಿ ಹಲ್ಲು ಮಸೆಯುತ್ತಿರುವನು! ಸಾಕ್ಷಾದ್ಬ್ರಹ್ಮನಿಗೂ ಅವನು ಬಗ್ಗುವಂತಿಲ್ಲ!

**ವಸಂತ:**--ಶಿಲಾದಿತ್ಯಾ! ನಮ್ಮ ಉತ್ಸವಭಂಗವಾದರೂ ಆಗಲಿ. ನಾನು ಸಹ ನಿನ್ನ ಹಿಂದಿಂದೇ ಬರುವೆನು. ನಡೆ.

**ಪ್ರಭಾ:**--ಪ್ರಾಣನಾಥಾ! ನೀವು ಈ ವಿಷಯದಲ್ಲಿ ಸ್ವಲ್ಪವೂ ಆಲೋಚನೆ ಮಾಡುವ ಕಾರಣವಿಲ್ಲ; ಮೂರು ಸಾವಿರ ರೂಪಾಯಿಗಳಿಗೆ ಆರು ಸಾವಿರ ರೂಪಾಯಿಗಳನ್ನು ಕೋಟಿಗೆ ಮೂವತ್ತುಸಾವಿರವನ್ನಾದರೂ ಕೊಟ್ಟು ಆ ಕಟಕ ಮಾರವಾಡಿಯ ಸಮಾಧಾನಗೊಳಿಸಿ, ನಿಮ್ಮ ಮಿತ್ರನನ್ನು ಸಂಕಟದಿಂದ ತಪ್ಪಿಸಿರಿ. ಆತನನ್ನು ನೀವು ಈ ಸಾಯಂಕಾಲ ನಮ್ಮ ಮಂದಿರಕ್ಕೆ ಕರೆತಂದರೆ, ನಮ್ಮ ವಿವಾಹದ ಉಪಸಂಹಾರದ ಉತ್ಸವಗಳನ್ನು ಸಂಪೂರ್ತಿಗೊಳಿಸಬಹುದು.

**ವಸಂತ:**— ನನ್ನ ಮಿತ್ರನನ್ನು ಉಳಿಸಲು ನಾನು ಸರ್ವವಿಧಪ್ರಯತ್ನಗಳನ್ನೇನೋ ಮಾಡುವೆನು. ಆದರೆ ದೈವಚಿತ್ತವನ್ನು ಕಂಡವರಾರು? ಪ್ರಾಣನಾಯಿಕೇ, ನಾನು ಹೋಗಿ ಬರಲು ಅಪ್ಪಣೆಯನ್ನು ಪಾಲಿಸು.

**ಪ್ರಭಾ:**— ಹೋಗಿ ಬರಬಹುದು. ನಿಮ್ಮ ಕಾರ್ಯವನ್ನು ಸರ್ವೇಶ್ವರನು ಸಿದ್ಧಿಗೊಳಿಸಲಿ. [ವಸಂತ ಕುಮಾರನು ಹೋಗುತ್ತಾನೆ.

**ಗುರು:**—ದೇವಿಯವರೇ, ಈ ಸಂದರ್ಭದಲ್ಲಿ ನಾನೂ ನಿಮ್ಮ ಪ್ರಾಣನಾಥನನ್ನು ಹಿಂಬಾಲಿಸುವೆನು. ನನಗೆ ಅನುಜ್ಞೆಯನ್ನು ದಯಪಾಲಿಸಬೇಕು. ನಾನಿಲ್ಲದ ವೇಳೆಯಲ್ಲಿ ನನ್ನ ಪ್ರಿಯಪತ್ನಿಯು ನಿಮ್ಮ ಸಹಚಾರಿಣಿಯಾಗಿರುವಳು. ಈಕೆಯ ವಿಷಯದಲ್ಲಿ ಹೆಚ್ಚಿಗೇನನ್ನು ಹೇಳಲಿ? ತಮ್ಮಂಥ ಜ್ಞಾನನಿಧಿಗಳಿಗೆ ತಕ್ಕ ಅನುಚರಳಾಗಿ ಇರಬಲ್ಲಳೆಂದು ಅರಿಕೆಮಾಡುವೆನು.

**ಪ್ರಭಾ:**-- ಗುರುಪ್ರಸಾದರೆ, ಶಶಿಕಲಾತಾಯಿಯ ವಿಷಯದಲ್ಲಿ ತಾವು ಹೆಚ್ಚಾಗಿ ಹೇಳುವ ಕಾರಣವೇ ಇಲ್ಲ! ನಾನೂ ಅವಳೂ ಒಡಹುಟ್ಟಿದವರೆಂದು ತಿಳಿದು ನಿಶ್ಚಿಂತರಾಗಿ ಹೊರಡಿರಿ. ತ್ವರೆಮಾಡಿರಿ. ಪರಮೇಶ್ವರನು ನಿಮ್ಮ ಪ್ರಯತ್ನಕ್ಕೆ ಯಶಸ್ಸನ್ನೀಯಲಿ. [ಗುರುಪ್ರಸಾದನು ಹೋಗುತ್ತಾನೆ.

**ಪ್ರಭಾ:**—(ನರ್ಮದೆಯನ್ನು ಕುರಿತು) ನರ್ಮದೇ, ಇಂತಹ ಸಂದರ್ಭದಲ್ಲಿ ನಾವು ಸಹ ಸುಮ್ಮನೆ ಕುಳಿತುಕೊಳ್ಳದೆ ಕೆಲಮಟ್ಟಿಗಾದರೂ ಪ್ರಯತ್ನಗಳನ್ನು ನಡಿಸಬೇಕು. ಈಗ ನಾನೊಂದು ಪತ್ರಿಕೆಯನ್ನು ಬರೆದು ನಿನ್ನ ಕೈಯಲ್ಲಿ ಕೊಡುವೆನು. ನೀನು ಈಗಿಂದೀಗಳೇ ರಥವನ್ನೇರಿ ನನ್ನ ಸೋದರಳಿಯನಾದ ನ್ಯಾಯವಾದಿ ಬಾಲಸರದಾರನ ಬಳಿಗೆ ಹೋಗಿ ನನ್ನ ಪತ್ರವನ್ನು ಕೊಟ್ಟು, ಆತನು ಅದಕ್ಕೆ ಏನು ಪ್ರತ್ಯುತ್ತ

ರವನ್ನು ಕೊಡುವನೋ ಅದನ್ನು ತರುವದಲ್ಲದೆ, ಆತನು ಧರಿಸುವ ನಾಲ್ಕು ತೋಳಿನ ಅಂಗಿ ಮುಂತಾದ ಉಡುಪು ತೊಡಪುಗಳನ್ನು ತೆಗೆದುಕೊಂಡು ಸತ್ವರದಿಂದ ಬಾ. ಹೋಗು.

**ನರ್ಮದೆ:**——ಹಾಗೆಯೇ ಮಾಡುವೆನು. ಹೋಗಿಬರುವೆನು. [**ಹೋಗುತ್ತಾಳೆ.**

**ಶಶಿ:**—— ತಾಯೀ ಪ್ರಭಾವತೀ, ಒಂದು ಮಾತನ್ನು ಕೇಳಲಾ !

**ಪ್ರಭಾ:**—— ತಂಗೀ ಶಶಿಕಲೇ, ಇಷ್ಟೊಂದು ಸಂಕೋಚವೇಕೆ ? ಕೇಳುಬೇಕಾದುದನ್ನು ಕೇಳು.

**ಶಶಿ:**—— ಈಗ ನರ್ಮದೆಯನ್ನು ಕಳುಹಿದೆಯಲ್ಲ. ಅದರ ಇಂಗಿತವು ನನಗೆ ತಿಳಿಯಲಿಲ್ಲ. ತಿಳಿಯಲು ಆಶಿಸುವೆನು. ನಿನ್ನ ಪತಿರಾಯರ ಮಿತ್ರರ ವಿಮೋಚನೆಗಾಗಿ ನಾನಾದರೂ ಕೈಲಾದಷ್ಟು ನೆರವಾಗಬೇಕೆಂದು, ಕುತುಕಬಡುವೆನು.

**ಪ್ರಭಾ:**—— (ಸ್ವಲ್ಪ ಆಲೋಚಿಸಿ) ಅನಂತ ಶ್ರೇಷ್ಠಿಯವರ ಬಿಡುಗಡೆಗಾಗಿಯೇ ನಾನೊಂದು ಹಂಚಿಕೆಯನ್ನು ಮಾಡಿದ್ದೇನೆ. ಅದಕ್ಕಾಗಿಯೇ ನರ್ಮದೆಯನ್ನು ಕಳಿಸಿದ್ದೇನೆ. ವಿಜಯಸಂಪಾವನೆ ಮಾಡಿಕೊಂಡು ಬಂದಬಳಿಕ ಎಲ್ಲವನ್ನೂ ವಿಶದವಾಗಿ ಹೇಳುವೆನು. ನಾನು ಪುರುಷವೇಷದಿಂದ ಹೊರಡುವೆನೆಂಬದನ್ನು ಮಾತ್ರ ಈಗ ತಿಳಿಸುವೆನು.

**ಶಶಿ:**—— ನೀನು ಹೀಗೆ ಶ್ರಮಬಡುತ್ತಿರಲು ನಾನು ಸುಮ್ಮನೇ ಕೂಡ್ರಲಾ? ಅವರು ವಸಂತಕುಮಾರರನ್ನು ಹಿಂಬಾಲಿಸಿದಂತೆ, ನಾನು ನಿನ್ನನ್ನು ಅನುಸರಿಸುವೆನು. ಪ್ರಭಾವತೀದೇವೀ, ನಾವಿಬ್ಬರೂ ಒಡಹುಟ್ಟಿದವರಿಗೆ ಸಮಾನರೆಂದು ನೀನು ಆಗಳೇ ಹೇಳಲಿಲ್ಲವೇ ?

**ಪ್ರಭಾವತಿ:**—— ಶಶಿಕಲೇ, ಇದೇ ಮಾತು ನಿಜವಾದರೆ ನೀನೂ ನನ್ನೊಡನೆ ಪುರುಷವೇಷದಿಂದ ಬರಲು ಸಿದ್ಧಳಾಗುವೆಯಾ ಹೇಳು ?

**ಶಶಿ:**—— ಓಹೋ ನಿಂತ ಹೆಜ್ಜೆಯ ಮೇಲೆಯೇ ಸಿದ್ಧಳು.

**ಪ್ರಭಾ:**—— ಹಾಗಾದರೆ, ನಡೆ. ಈಗಳೇ ಹೊರಡುವಾ ! ತಡಮಾಡಿದರೆ ಪ್ರಯೋಜನವಾಗಲಾರದು. ನರ್ಮದೆಯು ಬರುವದರೊಳಗಾಗಿ ಉಳಿದ ಎಲ್ಲ ಸಿದ್ಧತೆಯನ್ನು ಮಾಡಿಕೊಳ್ಳುವಾ. ಅಂದರೆ ನನ್ನ ಹಂಚಿಕೆಯು ತಾನಾಗಿಯೇ ನಿನಗೆ ಗೊತ್ತಾಗುವದು. [**ಹೋಗುತ್ತಾರೆ.**



## ೫ನೆಯ ರಂಗ:—ಕಾರಾಗೃಹದ ಮುಂದಿನ ಬಯಲು

( ಬಂಧಿತನಾದ ಅನಂತಶ್ರೇಷ್ಠಿಯು ಆರಕ್ಷಕಭಟರೊಡನೆ ಶೂಲಕ್‌ಚಂದನೂ ಬರುತ್ತಾರೆ. )

**ಶೂಲಕ್:**—ಆರಕ್ಷಕಭಟರೇ, ಬಹು ಜಾಗ್ರತೆ ! ಈ ತಪ್ಪುಗಾರನ ಮುಖಭಾವವನ್ನು ನೋಡಿ, ಮೋಸಹೋಗಬೇಡಿರಿ. ಮತ್ತೆಲ್ಲಿಯಾದರೂ ಓಡಿ

ಹೋದಾನು ! ಜಾಗ್ರತೆಯಿಂದ ಅವನನ್ನು ರಾಜಾಸ್ಥಾನವನ್ನು ಸೇರಿಸಿ ಬಿಡಿರಿ.

**ಅನಂತ**:—ಶೆಟ್ಟೀ, ಶೂಲಕ್‌ಚಂದ, ಇನ್ನೂ ನಿನಗೆ ಕರುಣವು ಹುಟ್ಟಿಲಿಲ್ಲವೇ ?

**ಶೂಲಕ್**:—ಮಾತನಾಡಬೇಡ ಮುಚ್ಚೋ ಬಾಯಿ! ಬೊಗಳುವ ನಾಯಿ ನಾನೋ ನೀನೋ ಈಗ ಹೇಳೋ ? ಮೂರು ತಿಂಗಳ ಹಿಂದೆ ಎಷ್ಟೆಷ್ಟೋ ಜಂಬವನ್ನು ಕೊಚ್ಚಿಕೊಂಡದ್ದನ್ನು ಮರೆತೆಯೇನೋ?

**ಅನಂತ**:— ಶೂಲಕ್‌ಚಂದ, ಈ ಹೊತ್ತಿನಲ್ಲಿ ನೀನೇದರೂ ಅನ್ನಬಹುದು. ದಯಮಾಡಿ ನಾನು ಹೇಳುವ ಮಾತನ್ನು ಲಾಲಿಸಿ ಕೇಳು. ಬಳಿಕ ನೀನೇನಾದರೂ ಮಾಡು.

**ಶೂಲಕ್**:—ಹೋಗೋ ಹೋಗ್; ನಿಮ್ಮಪ್ಪಗೆ ಹೇಳ್. ರಾಜನ ಕಚೇರಿ ಒಳಗೆ ಹೇಳಿಕೋ ಹೋಗ್; ನನಗೇನು ಹೇಳತೀ? ಬಡ್ಡೀಮಗಾ ಯಾರೋ ನೀನೋ ನಾನೋ ?

**ಶಿಲಾ**:—ಶೆಟ್ಟೀ, ಹಿಂದಿನ ಸಂಗತಿಗಳನ್ನು ಮರೆತು ಬಿಡಿರಿ. ವಸಂತಕುಮಾರನು ನಿಮ್ಮ ರೂಪಾಯಿಗಳನ್ನು ಬಡ್ಡಿಸಹಿತವಾಗಿ ತೀರಿಸಿ ಬಿಡುವನು.

**ಶೂಲಕ್**:—ಹೋಗಯ್ಯಾ ಹೋಗ್. ನನಗೆ ಗಂಟೂ ಬೇಡ! ಬಡ್ಡಿಯೂ ಬೇಡ ! ನನಗೆ ಬೇಕಾದದ್ದನ್ನು ರಾಜಾನ ಕಚೇರಿಯಲ್ಲಿ ಅವರೇ ಕೊಡಿಸುವರು.

**ಅನಂತ**:-ಮಿತ್ರಾ, ಶಿಲಾದಿತ್ಯಾ!ಮನುಷ್ಯನ ಮಾಂಸವನ್ನಪೇಕ್ಷಿಸುವ ಕಟಕ ಚಾಂಡಾಲನಿಗೆ ಕರುಣವು ಹುಟ್ಟುವದೇ! ಆದದ್ದಾಗಲಿ. ನಾನು ರಾಜಾಸ್ಥಾನಕ್ಕೆ ಹೋಗುವೆನು. ನನ್ನ ಪ್ರಿಯಸಖನಾದ ವಸಂತಕುಮಾರನು ಇನ್ನೂ ಏತಕ್ಕೆ ಬರಲಿಲ್ಲ?

( ವಸಂತಕುಮಾರನು ಬರುತ್ತಾನೆ. )

**ವಸಂತ** :—( ಅನಂತನನ್ನಪ್ಪಿಕೊಂಡು ) ಹಾ ! ಪ್ರಿಯತಮಾ ! ಹಾ ಪ್ರಜಾಬಂಧೋ ! ಹಾ ದಯಾಸಾಗರಾ ! ಇನ್ನೇನು ಗತಿ ! ಯಾರ ಮರೆಹೊಗಲಿ ?

**ಶೂಲಕ್**:—ಅಯ್ಯಾ, ಆರಕ್ಷಕಭಟರೇ, ವೇಳೆಯಾಯಿತು. ಈ ಬಯಲು ಡೊಂಬರ ಗೋಳಾಟಕ್ಕೆ ಮರುಳಾಗಿ ನಿಲ್ಲಬೇಡಿರಿ. ನಿಂದಿತನನ್ನು ರಾಜಾಸ್ಥಾನಕ್ಕೆ ಕರೆದೊಯ್ಯಿರಿ. ಬಲು ಎಚ್ಚರಿಕೆ !

**ಆರಕ್ಷಕಭಟರು**:—ಸ್ವಾಮಿ, ವೇಳೆಯಾಯಿತು. ನೀವು ನಿಜವಾಗಿ ನಿರಪರಾಧಿಗಳಾಗಿದ್ದರೂ ನಾವು ರಾಜಾಜ್ಞೆಯನ್ನು ನಿರ್ವಹಿಸದೆ ಇರಲಾರೆವು. ತ್ವರೆ ಮಾಡಿರಿ. [ಎಲ್ಲರೂ ಹೋಗುತ್ತಾರೆ.



# ನಾಲ್ಕನೆಯ ಅಂಕವು

## ೧ ನೆಯ ರಂಗ—ರಾಜಾಸ್ಥಾನ

**ಅರಸನು ಆಸ್ಥಾನದಲ್ಲಿ ಕುಳಿತಿರುವನು. ನ್ಯಾಯವಾದಿಗಳು ನ್ಯಾಯ ವಿಮರ್ಶಕರು ಬೇರೆ ಬೇರೆ ಅಧಿಕಾರಿಗಳು ವಿಲೇಖಕರು ಸೇವಕರು ಪ್ರೇಕ್ಷಕರು ಅವರವರ ಸ್ಥಾನದಲ್ಲಿ ಕುಳಿತಿರುವರು. ನಿಂದಿತನಾದ ಅನಂತ ಶ್ರೇಷ್ಠಿಯನ್ನು ಆರಕ್ಷಕಭಟರು ತಂದು ರಾಜನ ಸಮ್ಮುಖದಲ್ಲಿ ನಿಲ್ಲಿಸುವರು.**

**ಅರಸು:**—ಅನಂತಶ್ರೇಷ್ಠಿಯು ಸಿದ್ಧನಿರುವನೆ ?

**ಅನಂತ:**—ಮಹಾಪ್ರಭೋ! ಇಲ್ಲಿಯೆ ಕಾದಿರುವೆನು.

**ಅರಸು:**—ಅನಂತಶ್ರೇಷ್ಠೀ, ನಿನ್ನ ಸ್ಥಿತಿಯನ್ನು ನೋಡಿದರೆ ನಮ್ಮ ಮನಸ್ಸು ಬಹು ವ್ಯಾಕುಲವಾಗುವದು. ಕರುಣಾಶೂನ್ಯನೂ ಕಠಿನಹೃದಯನೂ ಆದ ಆ ದುಷ್ಟ ಮಾರವಾಡಿಯು ಬಲಿಗೆ ಬಿದ್ದಿರುವ ನೀನು ಕಡೆ ಹಾಯುವದು ಬಹು ಕಠಿಣವಾಗಿ ತೋರುವದು.

**ಅನಂತ:**—ದೇವಾ ! ತಾವು ಸಹ ನನ್ನ ವಿಷಯದಲ್ಲಿ ಎಷ್ಟೋ ಸಹಾನುಭೂತಿಯನ್ನು ತೋರಿ ಆ ಕಟಕನನ್ನು ಈ ದುಷ್ಟಕಾರ್ಯದಿಂದ ಹಿಂದಿರುಗಿಸಲು ಎಷ್ಟೆಷ್ಟೋ ಪ್ರಯತ್ನಿಸಿದಿರಂತೆ ! ಆದರೆ ನನ್ನ ಕರ್ಮಾನುಭವವನ್ನು ತಪ್ಪಿಸಲು ಆರಿಗೆ ತಾನೆ ಸಾಧ್ಯವು ? ಆದುದರಿಂದ ಕೇವಲ ಶಾಂತತೆಯಿಂದ ಸಮಾಧಾನವನ್ನು ತಾಳಿ ಅವನ ಕ್ರೋಧಕ್ಕೆ ಈಡಾಗಿ ನಿಲ್ಲಲು ನಿರ್ಧರಿಸಿರುವೆನು.

**ಅರಸು:**—ನಮ್ಮ ಕೈಲಾದ ಪ್ರಯತ್ನವನ್ನೇನೋ ನಾವು ಮಾಡಿದೆವು. ಮೀರಿದ ಬಳಕ ಮಾಡುವದೇನು ? ಯಾರಲ್ಲಿ ? ವಾದಿಯಾದ ಆ ಮಾರವಾಡಿಯು ಬಂದಿದ್ದರೆ ಇತ್ತ ಕರೆದು ತನ್ನಿ.

**ಸೇವ:**—ಭಾಗ್ಯವು. **(ಹೊರಗೆ ಹೋಗಿ ಬಂದು)** ದೇವಾ, ಮಾರವಾಡಿಯು ಬಂದು ಮಹಾದ್ವಾರದಲ್ಲಿ ಕಾದಿರುವನು. ಕರೆಯುವದೊಂದೇ ತಡ, ಇಕೋ ಇಲ್ಲಿಗೆ ಬಂದನು. ಪರಾಮರಿಸಬೇಕು.

**(ಶೂಲಕ್‌ಚಂದನು ಬರುತ್ತಾನೆ.)**

**ಅರಸು:**—ಅವನನ್ನು ನಮ್ಮ ಸಮ್ಮುಖದಲ್ಲಿ ತಂದು ನಿಲ್ಲಿಸಿರಿ. **(ಹಾಗೆಮಾಡುವರು)** **ಶೂಲಕ್ ಚಂದ ಶೆಟ್ಟೀ, ನೀನು ಈ ಸಂದರ್ಭದಲ್ಲಿ ಕೇವಲ ನಿಷ್ಕರುಣಿಯಾಗಿ**

ಮಾಡತೊಡಗಿದ ಕಾರ್ಯದಿಂದ ಮತ್ಸರದ ಅತಿಪ್ರಸಂಗವು ಮರ್ಯಾದೆಮೀರಿ ತೆಂದು ಈ ಸಭಾಸ್ಥಾನದಲ್ಲಿರುವ ನ್ಯಾಯವಾದಿಗಳು, ನ್ಯಾಯಸಂಶೋಧಕರು, ಪ್ರೇಕ್ಷಕರಾಗಿ ಬಂದ ಸಾಮಾನ್ಯ ಪ್ರಜರು ಎಲ್ಲರೂ ತಿಳಿದಿರುವರು. ನಮಗಾದರೂ ಹಾಗೆಯೇ ತೋರುತ್ತದೆ. ಜನೋಪಕಾರವನ್ನು ಮಾಡಲು ಯತ್ನಿಸಿದ ಸಾಧು ವರ್ತಕನ ದೇಹದ ಮೂರು ಸೇರು ಮಾಂಸದಿಂದ ನಿನ್ನ ಆತ್ಮವು ತೃಪ್ತಿಬಡುವ ದೇನು? ಈ ಹಟವಾದವು ಬೇಡ. ಒಂದಲ್ಲದೆ ಹಲವು ಬಗೆಯ ಕಷ್ಟಗಳಿಗೆ ಈಡಾ ಗಿರುವ ಈ ಶೆಟ್ಟಿಗೆ ಒದಗಿದ ದುಃಸ್ಥಿತಿಯನ್ನು ಕಂಡರೆ ಕಲ್ಲೆದೆಯವರು ಕೂಡ ಇವನನ್ನು ಕರುಣಿಸಲು ಸಿದ್ಧರಾಗುವರು. ಆದುದರಿಂದ ನೀನು ಅಮಾನುಷವಾದ ವಿಪರೀತ ದಂಡನೆಯನ್ನು ಕೊಡಿಸಬೇಕೆಂಬುವ ಹಟವನ್ನು ಬಿಟ್ಟು ನಿನಗೆ ಬರ ತಕ್ಕ ಮೂಲಧನದಲ್ಲಿ ಸಹ ಅಲ್ಪಸ್ವಲ್ಪ ಭಾಗ ಬಿಡಬೇಕೆಂಬುವದೇ ನಮ್ಮ ಅಭಿ ಲಾಷೆಯು. ಇದಕ್ಕೇನೆನ್ನುವಿ ?

**ಶೂಲಕ್**:—ದೊರೆಗಳೇ, ಈ ವಿಷಯದಲ್ಲಿ ಮಾತ್ರ ನನ್ನ ಪತ್ರದಲ್ಲಿ ಉದಾಹರಿಸಿದ ನಿಬಂಧನೆಗಳನ್ನು ಅತಿಕ್ರಮಿಸಿಯಾಗಲಿ, ಕೊರತೆಮಾಡಿಯಾಗಲಿ ನಾನು ನಡೆದುಕೊಳ್ಳಲಾರೆನೆಂದು ನನ್ನ ಕುಲದೇವತೆಯ ಸಮ್ಮುಖದಲ್ಲಿ ಪ್ರಮಾಣ ಮಾಡಿರುವೆನು. ಇದರಿಂದ ಬಂದ ಅನರ್ಥವು ಬರಲಿ. ಕೊನೆಗೆ ನನ್ನ ಹಣವು ಮುಳುಗಲಿ. ಆದರೂ ನಾನು ಕೇಳುವವನಲ್ಲ. ಇದರ ಮೇಲೆ ತಮ್ಮಂಥ ಪ್ರಭು ಗಳು ನ್ಯಾಯವನ್ನು ತಪ್ಪಿ ವರ್ತಿಸಿದರೆ ಅದರಿಂದುಂಟಾಗುವ ಗೌರವ, ಹಾನಿ, ಮತ್ತು ಧರ್ಮಲೋಪವು ತಮಗೇ ಹೊರತು ನನಗೆ ಸಂಬಂಧವಿಲ್ಲ. ಇದರಿಂದ ತಮ್ಮ ಇಡೀ ರಾಜ್ಯದಾಡಳತೆಗೆ ಸಹ ಕಲಂಕವೆಂದು ತಿಳಿಯಬೇಕು. ಮೂರುಸೇರು ಮಾಂಸದಿಂದ ನನ್ನ ಆತ್ಮಸುಖವಾಗುವದೇನೆಂದು ತಾವು ಕೇಳೋಣವಾಯಿತು. ಇದಕ್ಕೆ ನಾನು ಉತ್ತರವನ್ನು ಕೊಡಲಾರೆನು. ಒಂದು ವೇಳೆ ಕೊಟ್ಟರೂ ಅದು ನನ್ನ ಮನೋಭಿಲಾಷೆಯೆಂದು ಹೇಳುವೆನು. ಇದು ನಿಮ್ಮ ಮನಸ್ಸಿಗೆ ತೃಪ್ತಿಕರವಾ ಗದಿದ್ದರೆ ಯತ್ನವಿಲ್ಲ! ಒಬ್ಬೊಬ್ಬರಿಗೊಂದೊಂದು ಬಗೆಯ ಹುಚ್ಚಿರುವದು. ಇದು ನನ್ನ ಹುಚ್ಚೆಂದು ತಿಳಿದುಕೊಂಡರಾಯಿತು. ಇದಕ್ಕೆ ನನ್ನ ಮನಸ್ಸೇ ಕಾರಣವು. ಇನ್ನೇನು ಹೇಳಿರಿ ? ಇನ್ನಾದರೂ ನಿಮಗೆ ಸಮಾಧಾನವಾಯಿತೇ ! ದೇವರೂ ! ಈ ಭೂಮಿಯಲ್ಲಿರುವ ಮನುಷ್ಯರ ಮನೋಭಾವನೆಗಳೆಲ್ಲ ಒಂದೇರೀತಿಯಾಗಿರು ವದಿಲ್ಲ. ಒಬ್ಬರು ಬೆಕ್ಕಿನ ಮರಿಯನ್ನು ಕಂಡರೆ ಚಿಟ್ಟನೆ ಚೀರಿ ಓಡುವರು. ಮತ್ತೊ ಬ್ಬರು ಅದನ್ನೇ ಸದಾ ತಮ್ಮ ಬಗಲಲ್ಲಿಟ್ಟುಕೊಂಡು ಮುದ್ದಿಸುವರು. ಒಬ್ಬರಿಗೆ

ಸೀಯು ಸೇರುವದಿಲ್ಲ. ಮತ್ತೊಬ್ಬರು ಹುಳಿಯನ್ನು ಮುಟ್ಟುವದಿಲ್ಲ. ಇದಕ್ಕೆ ಕಾರಣವನ್ನು ಹೇಳೆಂದರೆ ಯಾರು ಹೇಳಬಲ್ಲರು? ನನ್ನ ಮನೆಯಲ್ಲುಂಟಾದ ಇಲಿಗಳ ಕಾಟವನ್ನು ತಪ್ಪಿಸಿಕೊಳ್ಳಲು ನಾನು ಸಾವಿರಾರು ರೂಪಾಯಿಗಳನ್ನು ಸೂರೆಮಾಡಿ ಕೊಂಡರೆ ನಿಮ್ಮ ಆಕ್ಷೇಪಣೆ ಯಾಕೆ ? ಇನ್ನಾದರೂ ನಿಮ್ಮ ಪ್ರಶ್ನಕ್ಕೆ ನನ್ನ ಉತ್ತ ರವು ಸಮರ್ಪಕವಾಯಿತೇ ? ಇದು ಸಹ ನಿಮಗೆ ತೃಪ್ತಿಕರವಾಗದಿದ್ದರೆ ನನ್ನ ದ್ವೇಷಿಯಾದ ಈ ಶೆಟ್ಟಿಯ ಮೇಲೆ ನನಗೆ ಬಹುಕಾಲದಿಂದಿರುವ ಆಕ್ರೋಶವನ್ನು ವಿಶೇಷಹಣವನ್ನು ವ್ಯಯಮಾಡಿಕೊಂಡಾದರೂ ತೀರಿಸಿಕೊಂಡು ಸಂತೋಷ ಬಡಬೇಕೆಂಬುವದೇ ನನ್ನ ಆಶಯವು. ಇದರಿಂದಾದರೂ ತಾವು ಸಮಾಧಾನವನ್ನು ಹೊಂದಬಹುದು !

**ವಸಂತ**:—ದುಷ್ಟಾ ! ದೊರೆಗಳು ಕೇಳಿದ ಪ್ರಶ್ನಕ್ಕೆ ಇದೇ ಏನು ನಿನ್ನ ಪ್ರತ್ಯುತ್ತರವು ?

**ಶೂಲಕ್**:—ನಿನ್ನನ್ನು ಸಂತೋಷಪಡಿಸುವದಕ್ಕೆ ನಾನು ಈ ಉತ್ತರವನ್ನು ಕೊಟ್ಟಿಲ್ಲ. ನೀನು ಕೇಳುವದೇನಯ್ಯಾ ಇದರಲ್ಲಿ ? ನೀನಾರು ?

**ಶೂಲಕ್**:—ನೀನು ಪ್ರೀತಿಸದ ಪ್ರಾಣಿಗಳನ್ನೆಲ್ಲ ಕೊಂದುಬಿಡಬೇಕೆಂ ಬುವದು ನಿನ್ನ ಅಭಿಮತವೋ ?

**ಶೂಲಕ್**:—ಕೊಲ್ಲದಿದ್ದರೆ ದ್ವೇಷವನ್ನಾದರೂ ಬೆಳಸಬಹುದಷ್ಟೇ ?

**ವಸಂತ**:—ಆದರೆ ನೀನು ಈಗ ದ್ವೇಷಕ್ಕೆ ನಿಲ್ಲದೆ ಕೊಲ್ಲುವದಕ್ಕೆ ಸಿದ್ಧ ನಾಗಿರುವಿಯಲ್ಲ.

**ಶೂಲಕ್**:— ಸರ್ಪವು, ಕಚ್ಚುವದೆಂದು ತಿಳಿದ ಬಳಿಕ ಅದನ್ನು ಕೊಲ್ಲದೇ ಬಿಡಬಹುದೇನು !

**ಅನಂತ**:— ಮಿತ್ರಾ ! ಆ ಕಟಕನ ಕೂಡ ವೃಥಾ ವಾಗ್ವಾದವೇಕೆ ? ಮೃತ್ಯುದೇವತೆಯ ಹೃದಯದಲ್ಲಿ ಎಂದಿಗಾದರೂ ಕರಣವು ಹುಟ್ಟುವದೆ ? ಸಮು ದ್ರದ ದಂಡೆಯ ಮೇಲೆ ನಿಂತು ಸಮುದ್ರವು ಉಕ್ಕೇರಿದಾಗ ನಮ್ಮನ್ನು ಮುಳು ಗಿಸ ಬೇಡವೆಂದರೆ ಅದು ಬಿಡುವದೇ ? ಹುಲಿಕರಡಿಗಳು ಮಾಂಸಾಹಾರವನ್ನು ನಿಷೇಧಿಸಬೇಕೆಂದು ಹೇಳಿದರೆ ಕೇಳುವವೇ ? ಬೇಡ, ಬೇಡ ! ಸುಮ್ಮನೆ ಯಾಕೆ ಬೇಡಿಕೊಳ್ಳುವೆ ? ನ್ಯಾಯಾಧಿಪತಿಗಳ ತೀರ್ಮಾನದಂತೆ ನಡೆದುಕೊಳ್ಳಲು ನಾನು ಸಿದ್ಧನೇ ಇರುವೆನು.

**ವಸಂತ**:—ಶೂಲಕ್ ಚಂದ, ನನ್ನ ಮಿತ್ರನು ನಿನ್ನಲ್ಲಿ ತಂದ ಮೂರು

ಸಾವಿರ ರೂಪಾಯಿಗಳಿಗೆ ಆರುಸಾವಿರ ರೂಪಾಯಿಗಳನ್ನು ಕೊಡುವೆನು. ಇನ್ನಾದರೂ ಕರುಣವಹಿಸು.

**ಶೂಲಕ್:**—ಏನೆಂದು ಹೇಳುವಿ ? ಮೂರುಸಾವಿರ ರೂಪಾಗಳಿಗೆ ಆರು ಸಾವಿರ ಕೊಡುವಿಯಾ ? ನೀನು ಕೊಡಲೊಪ್ಪಿದ ಆ ಆರು ಸಾವಿರ ರೂಪಾಯಿಗಳಲ್ಲಿರುವ ಪ್ರತಿ ರೂಪಾಯಿಗಾರರಷ್ಟು ಅಧಿಕವಾಗಿ ಕೊಟ್ಟರೂ ನಾನು ಆ ರೂಪಾಯಿಗಳನ್ನು ತೆಗೆದುಕೊಳ್ಳದೆ, ಪತ್ರದಲ್ಲಿ ಕಂಡುಬರುವ ನಿಬಂಧನೆಗಳನ್ನು ಅನುಸರಿಸಿ ತೀರ್ಪು ಮಾಡುವಂತೆ ಈ ನ್ಯಾಯಾಧೀಶರನ್ನು ಬೇಡಿಕೊಳ್ಳುವೆನು.

(ಪುರುಷ ವೇಷದಿಂದ ಬಂದ ಶಶಿಕಲೆಯೊಡನೆ ಸೇವಕನು ಬರುತ್ತಾನೆ.)

**ಸೇವಕ:**—ದೇವ ! ಈ ವಿಲೇಖಕನು ತಮಗೊಂದು ಪತ್ರಿಕೆಯನ್ನು ತಂದಿರುವನು; ಸ್ವೀಕರಿಸಬೇಕು.

**ಅರಸು:**—ರಾಮನಗರದ ನ್ಯಾಯವಾದಿ ಬಾಲಸರದಾರರಿಂದ ಈ ಪತ್ರವನ್ನು ತಂದಿರುವೆಯಾ ?

**ಶಶಿಕಲೆ:** – (ಪತ್ರವ ಕೊಟ್ಟು) ಅಹುದು. ಅದನ್ನು ವಾಚಿಸಲು ವಿಷಯವು ವಿಶದವಾಗಬಹುದು.

(ಅರಸನು ಪತ್ರಿಕೆಯನ್ನು ಓದುತ್ತಿರಲು ಶೂಲಕ್‌ನು ತನ್ನ ಕತ್ತಿಯನ್ನು ಮಸೆಯುವದನ್ನು ವಸಂತಕುಮಾರ ಗುರುಪ್ರಸಾದರು ನೋಡುವರು)

**ಗುರು:**—ಕಟಕಾಧಮಾ ! ನಿನ್ನ ಕತ್ತಿಯನ್ನು ನಿನ್ನ ಪಾದರಕ್ಷೆಯ ಮೇಲೆ ಮಸೆದುಕೊಳ್ಳುವದಕ್ಕೆ ಬದಲಾಗಿ ನಿನ್ನ ಎದೆಯ ಮೇಲೆ ಮಸೆದುಕೊಳ್ಳಬಾರದೇ ? ನಿನ್ನ ದೌರಾತ್ಮ್ಯವು ನಿನ್ನ ಚೂರಿಗಿಂತಲೂ ಕಟಕನ ಕೈಕೊಡಲಿಗಿಂತಲೂ ಹೆಚ್ಚು ಹದನವಾಗಿಯೂ, ವಿಷಭರಿತವಾಗಿಯೂ ಇರುವದು. ಅರಪ್ರಾರ್ಥನೆಯೂ ನಿನ್ನ ಕಲ್ಲೆದೆಯಲ್ಲಿ ಕರುಣವನ್ನು ಹುಟ್ಟಿಸಲಿಲ್ಲವಲ್ಲವೆ ?

**ಶೂಲಕ್:**— (ಮನದಲ್ಲಿ ಹಲ್ಲು ಕಡಿಯುತ್ತ) ಇವನೇ ನನ್ನ ಮಗಳನ್ನು ಕದ್ದೊಯ್ದ ನೀಚನು ! (ಪ್ರಕಾಶವಾಗಿ) ಇಲ್ಲ, ಇಲ್ಲ, ಎಂದಿಗೂ ಇಲ್ಲ. ನೀನು ತಲೆ ಕೆಳಗಾಗಿ ಬಿದ್ದು ಹೊರಳಾಡಿದರೂ ಇಲ್ಲ ತಿಳಿಯಿತೇ ?

**ಗುರು:**—ದುರಾತ್ಮಾ ! ದುಶ್ಚರಿತಾ ! ಮತ್ಸರಭರಿತಾ ! ದುಷ್ಟ ಮೃಗದ ಕ್ರೌರ್ಯವು ಮಾನವ ದೇಹದಲ್ಲಿ ಮುಚ್ಚಲ್ಪಟ್ಟ ನರಪಶುವು ನೀನೆಂದೇತಕೆ ಕರೆಯಬಾರದು ? ಮಾಂಸಾಶನನಾದ ಆವರಾಕ್ಷಸನು ನಿನ್ನ ದೇಹದಲ್ಲಿ ಹೊಕ್ಕಿರುವನೋ ಅರಿಯೆ !

**ಶೂಲಕ್**:—ಅಯ್ಯೋ ! ಯಾತಕ್ಕೆ ನಿನ್ನ ಗಂಟಲ ಹರಿದುಕೊಂಡು ವೃಥಾ ಶ್ರಮಭಾಗಿಯಾಗುವೆ ? ನಾನು ಇಲ್ಲಿ ನ್ಯಾಯವಿಮರ್ಶನೆಗಾಗಿ ಕಾದಿರುವೆನು. ನಿನ್ನ ಒದರಾಟ , ಚೀರಾಟ ಗೋಳಾಟವನ್ನೂ ಅರ್ಭಾಟವನ್ನೂ ಕೇಳಲು ನಿಂತಿಲ್ಲ. ಸ್ವಾಮೀ, ನ್ಯಾಯಾಧಿಪತಿಗಳೇ , ತ್ವರೆಗೊಳಿಸಿರಿ !

**ಅರಸು**:—ನಾನು ಅದರ ಸಲುವಾಗಿಯೇ ಕಾದಿರುವೆನು. ಏನಯ್ಯಾ, ವಿಲೇಖಕಾ ! ನೀನು ತಂದ ಪತ್ರಿಕೆಯಲ್ಲಿ ಸೂಚಿಸಿದ ಬಾಲಸರದಾರನ ಪ್ರತಿನಿಧಿಯಾಗಿ ಬರುವ ನ್ಯಾಯವಾದಿಯ ವಿಜಯೆಂದ್ರಕುಮಾರನು ಇನ್ನೂ ಬರಲಿಲ್ಲವಲ್ಲ !

**ಶಶಿಕಲೆ**:—ದೇವಾ ! ಇಲ್ಲಿಯೇ ಬಂದರು. ಪರಾಮರಿಸಬೇಕು.

(ನ್ಯಾಯವಾದಿವೇಷಧಾರಿಯಾದ ಪ್ರಭಾವತಿಯು ಬರುತ್ತಾಳೆ.)

**ಪ್ರಭಾ**:—ರಾಜಾಧಿರಾಜರಿಗೆ ವಂದಿಸುವೆನು.

**ಅರಸು**—ಜಯಶೀಲನಾಗು. ನಿನಗೆ ಸ್ವಾಗತವು. ನೀನೇನೇ ಬಾಲಸರದಾರನ ಪ್ರತಿನಿಧಿಯಾಗಿ ಬಂದ ವಿಜಯೆಂದ್ರಕುಮಾರ ನ್ಯಾಯವಾದಿಯು. ನಿಮ್ಮ ಸರದಾರರು ಅಸ್ವಸ್ಥರಾಗಿದ್ದಾರೆಯೇ ?

**ಪ್ರಭಾ**:—ಅಹುದು. ಸ್ವಾಮೀ , ಅದಕ್ಕಾಗಿಯೇ ನನ್ನನ್ನು ಕಳಿಸಿದರು.

**ಅರಸು**:—ಆಗಲಿ. ಈ ದಿನದ ಪ್ರಸಂಗವನ್ನು ನೀನು ಚೆನ್ನಾಗಿ ಅರಿತುಕೊಂಡಿದ್ದರೆ ಕಾರ್ಯ ಭಾಗವನ್ನು ಪ್ರಾರಂಭಿಸಬಹುದಲ್ಲವೆ ?

**ಪ್ರಭಾ**:—ಇರುವ ಪರಿಸ್ಥಿತಿಯನ್ನು ತಕ್ಕಮಟ್ಟಿಗೆ ಅರಿತುಕೊಂಡೇ ಬಂದಿರುವೆನು. ಕಾರ್ಯಭಾಗವನ್ನಾರಂಭಿಸಬಹುದು. ಇದರಲ್ಲಿ ನಿಂದಿತನಾದ ಆ ಅನಂತಶ್ರೇಷ್ಠಿಯು ಯಾವಾತನು ? ಮಾರವಾಡಿ ಶೂಲಕ್‌ಚಂದನು ನೀನೇ ಏನು?

**ಶೂಲಕ್**:—ಹೌದು ಸ್ವಾಮೀ ! ನನ್ನನ್ನೇ ಶೂಲಕ್‌ಚಂದನೆನ್ನುವರು.

**ಪ್ರಭಾ**:—ಅಯ್ಯಾ ! ನಿನ್ನ ಕೋರಿಕೆಯು ಬಹು ಆಶ್ಚರ್ಯಕರವಾಗಿದೆ. ಆದರೂ ಈ ದೇಶದ ಆಚಾರವ್ಯವಹಾರದ ಮೂಲವಾದ ನ್ಯಾಯಶಾಸ್ತ್ರಕ್ಕೆ ವಿರೋಧವಾಗಿರುವದಿಲ್ಲ. ಅಯ್ಯಾ , ಅನಂತಶ್ರೇಷ್ಠೀ ! ನಿಂದಿತನಾದ ನಿನ್ನ ಸ್ಥಿತಿಯು ಬಹು ಅಪಾಯಕರವಾಗಿರುವದಲ್ಲದೆ, ನಿನ್ನ ಪ್ರಾಣವೇ ಈ ಮಾರವಾಡಿಯ ಕೈವಶವಾಗಿರುವದು.

**ಅನಂತ** :— ನಿಶ್ಚಯವು. ಆ ಮಾರವಾಡಿಯು ಸಹ ಇದರಂತೆಯೇ ತಿಳಿದಿರುವನು.

**ಪ್ರಭಾ:**—ಹಾಗಾದರೆ ಪತ್ರದಲ್ಲಿ ಉದಾಹರಿಸಿದ ಒಡಂಬಡಿಕೆಗಳಿಗೆ ನಿನ್ನ ಒಪ್ಪಿಗೆಯು ಇರುವದಲ್ಲವೆ ?

**ಅನಂತ:**—ಇರುವದು. ಅದರಲ್ಲಿ ಯಾವದೂ ಅಪೋಹವಿಲ್ಲ.

**ಪ್ರಭಾ:**—ಹಾಗಿದ್ದರೆ ನಿನ್ನ ಪ್ರಾಣವನ್ನು ಉಳಿಸಲು ಈ ಮಾರವಾಡಿಯ ದಯಾಳುತನವಲ್ಲದೆ ಮತ್ತೆ ಇನ್ನಾವದೂ ಉಳಿದಿಲ್ಲ !

**ಶೂಲಕ್:**—ಸ್ವಾಮೀ ! ಇದರಲ್ಲಿ ನಿಮ್ಮ ಬಲವಂತವೇನಾದರೂ ಉಂಟೇನು ?

**ಪ್ರಭಾ:**—ಎಳ್ಳಷ್ಟಾದರೂ ಇಲ್ಲ ! ಬಲವಂತದಿಂದ ಕರುಣವನ್ನು ಹುಟ್ಟಿಸುವದು ಎಂದಿಗೂ ಸಾಧ್ಯವಿಲ್ಲ. ಆಕಾಶಮಂಡಲದಿಂದಿಳಿವ ಮಳೆಹನಿಯಂತೆ ಕರುಣಾರಸವು ಪ್ರಜಾವರ್ಗಕ್ಕೆಲ್ಲ ಶಾಂತತೆಯನ್ನು ಉಂಟು ಮಾಡಿ ಸಂತೋಷ ದಾಯಕ ವಾಗುವದು.

ಧರೆಯ ತಲದಲಿ ಸುರಿವ ಮಳೆಹನಿ ತೆರದೊಳಿರುವದು ಕರುಣವು ।
ಅರಿಯಲದು ಸುಖಕರವು ಬಹುಬಗೆ ಅರುಹಲೇತಕೆ ಸಿರುತವು ॥
ಕೊಡುವಕೊಳ್ಳುವ ರಿರ್ವರತಿ ಸುಖಬಡೆವರದರಿಂದನುದಿನಾ ।
ಪೊಡವಿಗೊಡೆಯರ ಮುಕುಟಕದು ಇಮ್ಮಡಿಯ೭ದಿರ್ದಪುದೆಂಬೆನಾ ॥
ಕರುಣ ದೈವವು ಕರುಣ ಶೌರ್ಯವು ಕರುಣ ಸರ್ವದ ಸೌಖ್ಯವು ।
ಕರುಣವಿಲ್ಲದ ನರನು, ನಕ್ತಂಚರನು ದುರುಳನು ದುಷ್ಟನು ॥
ಕರುಣವಿಹಪರ ಸಾಧನವು ನಿಷ್ಕರುಣ ನರಕದ ದ್ವಾರವು ।
ಕರುಣಲಕ್ಷ್ಮೀವರನ ಅಂಶವು ಕರುಣಕಿಲ್ಲವು ಸಾಮ್ಯವು ॥

ಅನ್ಯರಿಂದ ಕಾರುಣ್ಯವನಪೇಕ್ಷಿಸುವ ನಾವು ಅನ್ಯರಿಗೆ ಕರುಣವನ್ನು ತೋರಲಾಗದೋ ? ನೀನೇ ಹೇಳು. ನನಗೆ ತಿಳಿದಷ್ಟು ನಿನಗೆ ಧರ್ಮಸೂಕ್ಷ್ಮವನ್ನು ತಿಳಿಯಪಡಿಸಿದೆನು. ಇದರ ಮೇಲೆ ನೀನು ಹಟಹಿಡಿದರೆ ದೊರೆಯು ಈ ವರ್ತಕನಿಗೆ ಪ್ರಾಣದಂಡನಶಿಕ್ಷೆಯನ್ನು ವಿಧಿಸಲು ಈ ದೇಶದ ಧರ್ಮಶಾಸ್ತ್ರದಿಂದ ಬದ್ಧನಾಗಿರುವನು.

**ಶೂಲಕ್:**—ಮಹಾಪ್ರಭೋ, ನನ್ನ ಕರ್ಮದ ಫಲವನ್ನು ನಾನು ಉಣ್ಣುವೆನು. ಮಾನನೀಯರೂ, ಜ್ಞಾನನಿಧಿಗಳೂ ಆದ ತಾವು ನ್ಯಾಯವಿಮರ್ಶನೆಯನ್ನು ಬಿಟ್ಟು ಇಂತಹ ವೇದಾಂತೋಪದೇಶವನ್ನು ಮಾಡತೊಡಗಿದರೆ ನಿಮ್ಮ ಕೀರ್ತಿಯು ಕ್ಷೀಣವಾಗುವದಲ್ಲದೇ ಬೇರೇ ಉಂಟೇನು ?

**ಪ್ರಭಾ** :— ಏನಯ್ಯಾ ! ಅನಂತಶ್ರೇಷ್ಠಿ ! ಈ ಮಾರವಾಡಿಯ ಸಾಲವನ್ನು ತೀರಿಸಲು ನಿನಗೆ ಸಾಧ್ಯವೇ ಇಲ್ಲವೇನು ?

**ವಸಂತ** :— ಹಾಗೇತಕೆನ್ನುವಿರಿ ? ಅವನು ಕೊಟ್ಟ ಹಣಕ್ಕಿಮ್ಮಡಿಯಾಗಿ ತೆಗೆದುಕೊಳ್ಳಲಿ ! ಅದು ಸಾಲದಾಗಿದ್ದರೆ ತಾ ಕೊಟ್ಟ ಹಣಕ್ಕೆ ಹತ್ತುಪಾಲಾದರೂ ತೆಗೆದುಕೊಂಡು ಸಮಾಧಾನ ಪಡೆಯಲಿ. ಇದನ್ನು ಸಹ ಮಾತ್ಸರ್ಯಮಗ್ನನಾದ ಇವನು ನಿರಾಕರಿಸಿದರೆ ನೀತಿಬಾಹ್ಯನಾದ ಇವನಿಗೆ ನ್ಯಾಯಕ್ಕಿಂತಲೂ ಬಲವಂತವೆ ಮೇಲು !

**ಪ್ರಭಾ**:— ಅಂತಹ ನ್ಯಾಯವಿರೋಧವಾದ ಕಾರ್ಯವೆಂದಿಗೂ ಇಲ್ಲಿ ಜರುಗಬಾರದು. ನ್ಯಾಯಪರಿಪಾಲನೆ ಮಾಡಲು ಬಂದ ನಾವೇ ಈ ರೀತಿ ನಡೆದುಕೊಂಡರೆ ಇತರರ ಆಚರಣೆಗಳಿಗೆ ಸಹ ನಾವೇ ಮೇಲು ಪಂಙ್ತ್ತಿಯನ್ನು ಹಾಕಿಕೊಟ್ಟಂತಾಗುವದಿಲ್ಲವೇ ? ಆದುದರಿಂದ ನಾವು ನ್ಯಾಯಪ್ರವರ್ತನೆಯಲ್ಲಿ ಸದಾ ನಮ್ಮ ದೃಷ್ಟಿಯನ್ನಿಡಬೇಕು !

**ಶೂಲಕ್**:—ಭಳಿರೆ! ಸರದಾರ ಮಗ ನೀನಹುದೋ ! ಧರ್ಮದೇವತೆಯ ಅವತಾರವೇ ನೀನು ಕಾಣಯ್ಯ ! ಮೂರ್ತಿ ಸಣ್ಣದಾದರೂ ಕೀರ್ತಿಯು ಒಲು ದೊಡ್ಡದು !

**ಪ್ರಭಾ**:—ಶೆಟ್ಟೀ, ಶೂಲಕ್ ಚಂದ ! ನಿನ್ನ ಪತ್ರವನ್ನು ನೋಡಿಕೊಡುವೆನು. ಸ್ವಲ್ಪ ಅದನ್ನು ಇತ್ತ ಕೊಡುವೆಯಾ ?

**ಶೂಲಕ್**:—ಅಗತ್ಯ ತೆಗೆದುಕೊಳ್ಳಿರಿ; ಮಹಾರಾಯರೇ ! ನೋಡಿರಿ. ಚೆನ್ನಾಗಿ ಓದಿಕೊಳ್ಳಿರಿ. ನನ್ನ ಕಡೆ ಏನಾದರೂ ಅನ್ಯಾಯವಿದ್ದರೆ ಹೇಳಿ ಬಿಡಿರಿ. ದೇವರೂ !

**ಪ್ರಭಾ**:—ಶೆಟ್ಟೀ, ನೀನು ಕೊಟ್ಟ ಹಣಕ್ಕೆ ಇಮ್ಮಡಿಯಲ್ಲ ಮುಮ್ಮಡಿಯಾದರೂ ಕೊಡಲು ಸಿದ್ಧರಿರುವರು. ಹಣವನ್ನು ಸ್ವೀಕರಿಸಿ, ಈ ಪತ್ರದ ತಲೆ ಹರಿದುಬಿಡಲು ಒಪ್ಪುವೆಯಾ ?

**ಶೂಲಕ್**:—ದೇವರೂ, ಆ ಮಾತು ಮಾತ್ರ ನನಗೆ ಹೇಳಲೇ ಬೇಡಿರಿ. ನಾನು ಆಗಳ ಪ್ರಮಾಣವನ್ನು ಮಾಡಿ ಬಿಟ್ಟಿರುವೆನು. ಬುದ್ಧೀ ! ಕೊನೆಗೆ ತಾವು ಈ ಪಟ್ಟಣವನ್ನು ನನಗೆ ಉಂಬಳಿಯಾಗಿ ಕೊಡಿಸಿದರೂ ನಾನು ಈ ಮಾತಿಗೆ ಒಪ್ಪುವಹಾಗಿಲ್ಲ.

**ಪ್ರಭಾ:**—ಹಾಗಾದರೆ ನನ್ನ ಯತ್ನವು ಮೀರಿತು ! ಮಾರವಾಡೀ; ಇದು ಕಡೆಯ ಮಾತು ! ಕೊನೆಗೆ ನಿನ್ನ ಹಣಕ್ಕೆ ನಾಲ್ಕುಪಟ್ಟಾದರೂ ತೆಗೆದುಕೊಂಡು ಈ ಪತ್ರವನ್ನು ಹರಿದು ಬಿಸುಟಲು ಸಮ್ಮತಿಯನ್ನು ಕೊಡುವೆಯಾ ? ನಿನಗೆ ಬಹು ಪುಣ್ಯವು ಬರುವದು.

**ಶೂಲಕ್:**—ದೇವರೂ ಪುಣ್ಯವು ಬರಲಿ, ಪಾಪವು ಬರಲಿ, ನೀವು ಸರ್ವವನ್ನು ತಿಳಿದವರು. ಪತ್ರದಲ್ಲಿ ಸ್ಪಷ್ಟವಾಗಿ ಹೇಳಿದ ಪ್ರಕಾರ ಕಾರ್ಯವನ್ನು ನಡಿಸುವದಾಗಿದ್ದರೆ ಈ ಕ್ಷಣವೇ ನಡೆಯಿಸಿ ಬಿಡಿರಿ. ಇಲ್ಲವಾದರೆ ಈ ರಾಜಸಭಾಸ್ಥಾನದಲ್ಲಿ ನ್ಯಾಯವು ದೊರೆಯಲಾರದೆಂದು ಹೇಳಿಬಿಡಿರಿ. ನಾನು ಈಗಳೆ ಹೊರಟೆನು!

**ಪ್ರಭಾ:**—ಅನಂತಶ್ರೇಷ್ಠೀ, ನನ್ನ ಪ್ರಯತ್ನಗಳೆಲ್ಲ ನಿಷ್ಫಲವಾದವು. ಇನ್ನು ನಿನ್ನ ಉದರವನ್ನು ಬಗೆಸಿಕೊಳ್ಳಲು ಸಿದ್ಧನಾಗು.

**ಶೂಲಕ್:**—ಭಳಿರೆ, ಧರ್ಮಾವತಾರ ! ಶಹಬಾಸ್ ! ನ್ಯಾಯಮೂರ್ತಿ!

**ಪ್ರಭಾ:**— ಅನಂತಶ್ರೇಷ್ಠೀ, ಇನ್ನು ಆಲಸ್ಯಮಾಡುವದರಿಂದ ಏನು ಪ್ರಯೋಜನವು ? ನಿನ್ನ ತೊಡಪನ್ನು ತೆಗೆದು ಎದೆಯನ್ನು ಮಾರವಾಡಿಗೆ ತೋರು. ಮಾರವಾಡೀ ! ಮಾಂಸವನ್ನು ತೂಗಿಕೊಳ್ಳಲು ತಕ್ಕಡಿಯನ್ನು ತಂದಿರುವೆಯಾ ?

**ಶೂಲಕ್:**—ಸಕಲವನ್ನೂ ಸಿದ್ಧಗೊಳಿಸಿರುವೆನು ದೇವರೂ !

**ಪ್ರಭಾ:**—ಹಾಗೂ ಒಬ್ಬ ಶಸ್ತ್ರವೈದ್ಯನನ್ನು ಕರೆಯಿಸಿಕೊಂಡಿದ್ದರೆ ಚೆನ್ನಾಗಿರುವದಿಲ್ಲವೆ ? ಮಾಂಸವನ್ನು ಕೊಯ್ದುಕೊಂಡಕೂಡಲೆ ರಕ್ತಸ್ರಾವವಾಗದಂತೆ ಅನಂತಶ್ರೇಷ್ಠಿಯ ಗಾಯವನ್ನು ಕಟ್ಟಬೇಡವೇ ?

**ಶೂಲಕ್:**—ಅದುಯಾಕೆ ? ಆ ವಿಷಯವನ್ನೇ ಪತ್ರದಲ್ಲಿ ಹೇಳಿಲ್ಲವಲ್ಲ ?

**ಪ್ರಭಾ:**— ಆದರೇನಾಯಿತು ? ಧರ್ಮದ ದೆಸೆಯಿಂದಾದರೂ ಮಾಡಬಾರದೇ ?

**ಶೂಲಕ್:**—ಇಂತಹ ದಾನಧರ್ಮಗಳ ಸುದ್ದಿಯನ್ನು ಕೂಡ ನನ್ನೆದುರಿಗೆ ತೆಗೆಯ ಬೇಡಿರಿ. ಅದು ಸದ್ಯದ ವಿಷಯಕ್ಕೆ ಸಂಬಂಧಿಸದು. ಧರ್ಮದ ಸಲುವಾಗಿ ಮಾಡಬೇಕೆಂದು ಈ ಕಾಗದದಲ್ಲಿ ಎಲ್ಲಿ ಬರೆದಿದೆ ?

**ಪ್ರಭಾ:**—ಹಾಗೋ ? ಆಗಬಹುದು ! ಅನಂತಶ್ರೇಷ್ಠೀ, ಇನ್ನೇನಾದರೂ ಹೇಳಿಕೊಳ್ಳುವದಾಗಲಿ ಮಾಡುವದಾಗಲಿ ಇದ್ದರೆ ಮುಗಿಸಿಬಿಡು.

**ಅನಂತ:**— ( ಅಳುತ್ತಿದ್ದ ವಸಂತಕುಮಾರನನ್ನು ಆಲಿಂಗಿಸಿ ) ಪ್ರಿಯಮಿತ್ರಾ, ಏತಕ್ಕಿಷ್ಟು ಪರಿ ದುಃಖಿಸುವೆ ? ಸುಮ್ಮನೆ ಕಣ್ಣೀರನ್ನು ಸುರಿಸಬೇಡ. ಕುರಿಯ ಹಿಂಡಿನಲ್ಲಿ ರೋಗಗತಗಲಿದ ಕುರಿಯನ್ನು ಬೇರೆಯಾಗಿ ತೆಗೆದಿಟ್ಟು ಕುರುಬನು ಉಳಿದ ಕುರಿಗಳನ್ನು ಕಾಪಾಡಿಕೊಳ್ಳುವಂತೆ, ನೀನು ನಿನ್ನ ಪರಿವಾರದೊಡನೆ, ಸುಖ ದಿಂದಿದ್ದರೆ ಸಾಕು. ನನ್ನ ಮೇಲಿರುವ ಪ್ರೀತಿಗಾಗಿ ನಾನು ಮೃತಿಹೊಂದಿದನಂ ತರ ನನ್ನ ಉತ್ತರಕ್ರಿಯೆಗಳನ್ನು ನೀನು ಮಾಡಿದರೆ ಅದರಿಂದ ನನ್ನ ಆತ್ಮಕ್ಕೆ ತೃಪ್ತಿಯಾಗುವದು. ಮಿತ್ರಾ, (ಕಣ್ಣೊರಿಸಿಕೊಂಡು) ನನ್ನ ಪ್ರಾಪ್ತಿಯು ಹೀಗಿರಲು ಆರೇನು ಮಾಡುವರು ? ಪ್ರಿಯತಮಳಾದ ನಿನ್ನ ಸತೀಶಿರೋಮಣಿಗೆ ನನ್ನ ವಂದನೆಗಳನ್ನು ಹೇಳು. ನಾನು ನಿಶ್ಚಯವಾಗಿ ನಿರಪರಾಧಿಯಾಗಿದ್ದರೂ ನನ್ನ ಅಹಂಭಾವವು ನನ್ನನ್ನು ಕೆಡಿಸಿತು. ಅದಕ್ಕೆ ಅನ್ಯರೆಂದಿಗೂ ಕಾರಣವಾಗರು.

**ವಸಂತ:**—ಮಿತ್ರಾ! ನಿನಗೆ ನನ್ನಿಂದಲೇ ಈ ದುಃಖವು ಪ್ರಾಪ್ತವಾಯಿತು. ಆದರೆ ನನಗೋ ನಿನ್ನಿಂದ ಪರಮಸಾಧ್ವೀಮಣಿಯಾದ ಸತಿಯೊಬ್ಬಳು ದೊರೆ ತಳು. ಈಗ ನಿನ್ನ ಪ್ರಾಣವನ್ನು ಉಳಿಸಲು ನನ್ನ ಸರ್ವಸ್ವವನ್ನೂ ನನ್ನ ಪ್ರಾಣ ವನ್ನೂ ಕೊನೆಗೆ ನನ್ನ ಪ್ರಿಯಸತಿಯನ್ನೂ ಈ ಚಂಡಾಲನ ದೆಸೆಯಿಂದ ಬಲಿ ಗೊಡಲು ಸಿದ್ಧನಿರುವೆನು.

**ಪ್ರಭಾ:**— ಶ್ರೀಮಂತರೇ, ನೀವು ಅಷ್ಟುಪರಿ ಹೊಗಳಿಕೊಂಡ ನಿಮ್ಮ ಪ್ರಿಯಸತಿಯು ನೀವು ಆಡಿದ ವಾಕ್ಯಸರಣಿಯ ಕೊನೆಯ ಮಾತಿನಿಂದ ಮಾತ್ರ ಎಂದಿಗೂ ಸಂತೋಷಬಡಳೆಂದು ಖಂಡಿತವಾಗಿ ತಿಳಿದುಕೊಳ್ಳಿರಿ !

**ಗುರು:**— ದೇವಾ! ನನಗೂ ಒಬ್ಬ ಸತಿಯು ಪೂರ್ವಜನ್ಮದ ಪುಣ್ಯ ದಿಂದ ಲಭಿಸಿರುವಳು. ಆದರೆ ಈ ಚಂಡಾಲನ ದುರ್ಬುದ್ಧಿಯನ್ನು ತಿರುಗಿಸಿ ಕರು ಣವು ಹುಟ್ಟುವಂತೆ ಮಾಡುವದಾಗಿದ್ದರೆ ಅವಳನ್ನಾದರೂ ಬಲಿಗೊಡಲು ನಾನೂ ಸಿದ್ಧನಿರುವೆನು.

**ಶಶಿಕಲೆ:**— ಭಳಿರೇ ಗುರುಪ್ರಸಾದ! ಈ ಮಾತು ನಿನ್ನ ಹೆಂಡತಿಯು ಇಲ್ಲದ ಕಾಲದಲ್ಲಾಡಿದೆ. ಆಕೆಯು ಎದುರಿಗೆ ಆಡಿದ್ದರೆ ಮಾತ್ರ ನಿಮ್ಮ ಗೃಹದಲ್ಲಿ ಒಂದು ದೊಡ್ಡ ರಗಳೆಯೇ ಏಳುತ್ತಿತ್ತು ಬಲ್ಲೆಯಾ ?

**ಶೂಲಕ್:**— (ತನ್ನಲ್ಲಿ ಅವಡುಕಚ್ಚಿ) ಅಯ್ಯೋ ! ನನ್ನ ಮಗಳನ್ನು ಓಡಿಸಿ ಕೊಂಡು ಹೋದ ನೀಚನಿವನು! (ಪ್ರಕಾಶವಾಗಿ) ಹೋಗಲಿ ಬಿಡಯ್ಯಾ! ಯಾಕೆ ತಲೆಹರಟೆ-ಕೆಲ್ಲೆಚ್ಚುತ್ತೀ? ಸ್ವಾಮೀ! ಇವರ ಸಂಸಾರದ ವಿಚಾರದಲ್ಲಿ ಸುಮ್ಮನೆ

ಯಾಕೆ ಹೊತ್ತುಗಳೆಯುವಿರಿ ? ಕಾರ್ಯಕ್ರಮವನ್ನು ಸತ್ವರದಿಂದ ನಡೆಸಲು ಅನುಜ್ಞೆಯನ್ನು ಕೊಡಿರಿ.

**ಪ್ರಭಾ**:— ಕೊಟ್ಟಿರುವೆವು. ತೀರ್ಪು ನಿನ್ನಂತೆ ಆಗಿದೆ. ಈ ವರ್ತಕನ ದೇಹದಲ್ಲಿರುವ ಮೂರು ಸೇರು ಮಾಂಸವು ನಿನ್ನದು. ಅದನ್ನು ನೀನು ತೆಗೆದು ಕೊಳ್ಳಲು ಈ ಸಾರ್ವಭೌಮರು ಅನುಜ್ಞೆಯನ್ನು ಇತ್ತಿರುವರು. ಆದುದರಿಂದ ನೀನು ಅದಕ್ಕೆ ಬಾಧ್ಯಸ್ಥನೂ ಸರ್ವಸ್ವತಂತ್ರನೂ ಆಗಿರುವಿ !

**ಶೂಲಕ್**:— (ಚೂರಿಯನ್ನು ಮಸೆದು) ಬಾರಯ್ಯಾ, ಶೆಟ್ಟೀ ಬಾ! ತಡವೇಕೆ? ತೆಗೆ ನಿನ್ನ ಎದೆಯನ್ನು !

**ಪ್ರಭಾ**:— ಶೆಟ್ಟೀ, ಸ್ವಲ್ಪ ತಡೆ, ಅಷ್ಟು ಆತುರವನ್ನೇಕೆ ಮಾಡುವಿ ? ನಿನ್ನ ಪತ್ರದ ನಿಬಂಧನೆಯಂತೆ ನಿನಗೆ ಅವನ ದೇಹದಲ್ಲಿಯ ಮೂರು ಸೇರು ಮಾಂಸವು ಮಾತ್ರ ಸೇರತಕ್ಕದ್ದು! ಅದಕ್ಕಿಂತ ಹೆಚ್ಚಾಗಿ ಒಂದು ಹನಿ ರಕ್ತವು ಕೂಡ ದೊರೆಯಲಾರದು. ಇದೂ ಅಲ್ಲದೆ ನಿನಗೆ ಸಲ್ಲತಕ್ಕ ಮೂರು ಸೇರು ಮಾಂಸ ಕ್ಕಿಂತ ಒಂದು ಗುಂಜಿಯ ತೂಕವನ್ನಾದರೂ ಹೆಚ್ಚಾಗಿ ಮಾಂಸವನ್ನು ಅವನ ದೇಹದಿಂದ ತೆಗೆದರೆ ನಿನ್ನ ಗತಿಯೇನಾಗುವದು ಬಲ್ಲೆಯಾ ?

**ಶೂಲಕ್**:— ಇದೇನು ಹೊಸ ವಿಷಯುಗಳನ್ನು ತೆಗೆದಿರಿ ?

**ಪ್ರಭಾ**:— ಅಲ್ಲಲ್ಲ! ಹೊಸವಲ್ಲ! ಇವೆಲ್ಲವೂ ಹಳೆಯ ವಿಷಯುಗಳೇ. ನಿನ್ನ ಪತ್ರದಲ್ಲಿ ಕಂಡುಬಂದ ಸಂಗತಿಗಳನ್ನು ಅತಿಕ್ರಮಿಸಿ ನಾನು ಎಂದಿಗೂ ಮಾತ ನಾಡುವದಿಲ್ಲ ! ಬೇಕಾದರೆ ನಿನ್ನ ಪತ್ರವನ್ನು ಮತ್ತೊಮ್ಮೆ ನೀನೇ ಓದಿ ನೋಡಿಕೊ! ಇದರಲ್ಲಿ ರಕ್ತದ ಒಂದು ಹನಿಯ ಸುದ್ದಿಯು ಕೂಡ ಇಲ್ಲ. 'ಮೂರು ಸೇರು ಮಾಂಸ' ಎಂದು ಸ್ಪಷ್ಟ ಶಬ್ದಗಳಿವೆ. ಅಷ್ಟನ್ನು ಮಾತ್ರ ಕೊಯ್ದುಕೋ. ಆದರೆ ಹಾಗೆ ಮಾಡುವಾಗ ಈ ಸಜ್ಜನನ ದೇಹದೊಳಗಿನ ಒಂದೇ ಒಂದು ರಕ್ತದ ಹನಿ ಯನ್ನು ಹೊರದೆಗೆದೆಯೆಂದರೆ ನೋಡು; ನಿನ್ನನ್ನು ಶೂಲಕ್ಕೆ ಏರಿಸಿ ನಿನ್ನ ಮನೆ ಮಾರುಬದುಕುಬಾಳ್ವೆಗಳನ್ನೆಲ್ಲ ಅರಸರು ಬೊಕ್ಕಸಕ್ಕೆ ಸೇರಿಸಿಕೊಳ್ಳುವರು. ಇದಾದರೂ ನ್ಯಾಯನಿಯಮಕ್ಕೆ ಒಳಪಟ್ಟ ಶಿಕ್ಷೆಯು! ತಿಳಿಯಿತೇ ?

**ಗುರು**:— ಏನೋ ಮಾರವಾಡೀ ! ಯಾಕೆ ಬೆಪ್ಪಾಗಿ ನಿಂತುಕೊಂಡೆ ? ಸಾಕ್ಷಾತ್ ಧರ್ಮದೇವತೆಯೇ ನ್ಯಾಯವಿಮರ್ಶನೆಗೆ ಬಂದಿರುವನಲ್ಲವೆ ? ನಿಜವು! ನಿಜವು ! ನಿನ್ನಪಾಲಿನ ಯಮಧರ್ಮದೇವತೆಯೇ ಈ ಮಾಹಾನುಭಾವನು !

**ಪ್ರಭಾ**:— ಶೆಟ್ಟೀ! ತಡವೇತಕೆ ? ತೆಗೆದುಕೋ. ನಿನಗೆ ಸಲ್ಲತಕ್ಕ ಮಾಂಸ

ವನ್ನು ! ಆದರೆ ನೀನು ಒಂದು ಬಿಂದು ರಕ್ತವನ್ನು ಕೂಡ ಕೆಳಗೆ ಕೆಡವಬಾರದು! ! ಮೂರು ಸೇರಿಗೆ ಅತಿಕ್ರಮಿಸಿ ಮಾಂಸವನ್ನು ಕೊಯ್ಯಬಾರದು ! ಕಂಡೆಯಾ ?

**ಗುರು:**— ಭಳಿರೇ ಧರ್ಮಾವತಾರ! ಭಳಿರೇ ನ್ಯಾಯಪರಿಪಾಲನ ಶೂರ! ಎಲ ಎಲವೊ ನೀಚ ಮಾರವಾಡೀ ! ಯಾಕೆ ಒಮ್ಮಿಂದೊಮ್ಮೆ ನಿನ್ನ ಮುಸಡಿಯು ಹೀಗೆ ಬಾಡಿ ಕಂದಿ ಕುಂದಿಹೋಯಿತು ?

**ಶೂಲಕ್:**— ದೇವರೂ, ಇಲ್ಲದ ರಗಳೆಯು ನನಗೆ ಬೇಡ. ನೀವು ಹೇಳಿದಂತೆ ಇವರು ನನಗೆ ಕೊಡಲೊಪ್ಪಿದ ಎರಡಷ್ಟು ಹಣವನ್ನಾದರೂ ಕೊಡಿಸಿ ಬಿಡಿರಿ. ಈ ಜನರ ಸಹವಾಸವೇ ನನಗೆ ಬೇಡ.

**ವಸಂತ:**— ಇಕೋ ಹಣವು ಸಿದ್ಧವಿರುವದು ! ಹಿಡಿ ಎಣಿಸಿಕೋ !

**ಪ್ರಭಾ:**— ಜಹಗೀರುದಾರರೇ ! ಸ್ವಲ್ಪ ತಡೆಯಿರಿ. ಈ ಮಾರವಾಡಿಗೆ ಪತ್ರದಲ್ಲಿ ಉದಾಹರಿಸಿದ ಒಡಂಬಡಿಕೆಯನ್ನು ಅತಿಕ್ರಮಿಸಿ ಒಂದು ಕಾಸಾದರೂ ದೊರೆಯಲಾರದು. ಏನಯ್ಯಾ, ಮಾರವಾಡೀ, ಮಾತನಾಡು.

**ಶೂಲಕ್:**— ಮಾತನಾಡುವದೇನಿದೆ ? ಸ್ವಾಮೀ, ನಾನು ಕೊಟ್ಟ ಹಣವನ್ನಾದರೂ ಕೊಡಿಸಿ ಬಿಡಿರಿ. ಈಗಳೆ ನಾನು ಹೋಗುವೆನು !

**ಪ್ರಭಾ:** — ಹಣವನ್ನೊಲ್ಲೆನೆಂದೂ, ಹಾಗೆ ಆಣೆಮಾಡಿರುವೆನೆಂದೂ ಈ ಸಭೆಯಲ್ಲಿ ಎಲ್ಲರ ಸಮಕ್ಷವಾಗಿ ಒಪ್ಪಿಕೊಂಡಿದ್ದೀಯಲ್ಲವೇ ? ಆದದರಿಂದ ತಪ್ಪು ದಂಡದ ಹೊರತಾಗಿ ನಿನಗೆ ಮತ್ತಿನ್ನೇನೂ ದೊರೆಯದು. ಅದನ್ನಾದರೂ ಮೊದಲೇ ಹೇಳಿದಂತೆ ಕುತ್ತಿನೊಳಗಿಂದ ತೆಗೆದುಕೊಳ್ಳಬೇಕು.

**ಶೂಲಕ್:**— ಹೋಗಲಿ ಬಿಡಿರಿ. ಅವರೇ ನನ್ನ ಋಣದಲ್ಲಿ ಬೀಳಲಿ. ಇನ್ನು ವ್ಯರ್ಥವಾಗಿ ವಾದಿಸಿ ಫಲವೇನು ? ಬಂದ ದಾರಿಗೆ ಸುಂಕವಿಲ್ಲವಷ್ಟೇ ? ನಾನೇ ಹೊರಟೆದ್ದು ಹೋಗುವೆನು !

**ಪ್ರಭಾ:**— ಹಾಗೆಂದಿಗೂ ಜರುಗಲಾರದು ! ನೀನು ದುರುದ್ದೇಶದಿಂದ ಅನ್ಯಾಯವಾಗಿ ಈ ಪುರಿಯ ವರ್ತಕನ ಪ್ರಾಣವನ್ನು ಅಪಹರಿಸಲು ಪ್ರಯತ್ನಿಸಿದ್ದರಿಂದ ನಿನ್ನ ಸ್ಥಿರಚರಾಸ್ತಿಗಳೆಲ್ಲವೂ ಈ ದೇಶದ ಧರ್ಮಶಾಸ್ತ್ರವನ್ನನುಸರಿಸಿ ಈ ಅನಂತಶ್ರೇಷ್ಠಿಗೇ ಸೇರತಕ್ಕವಾಗಿವೆ. ಮತ್ತು ನಿನಗೆ ಪ್ರಾಣದಂಡನೆಯ ಶಿಕ್ಷೆಯನ್ನು ವಿಧಿಸಲು ಈ ಚಕ್ರವರ್ತಿಗಳು ಸ್ವತಂತ್ರರಾಗಿರುವರು. ಆದುದರಿಂದ ನಿನಗೆ ಪ್ರಾಣದಾನವನ್ನು ಮಾಡಲು ಮಹಾರಾಜರನ್ನು ಬೇಡಿಕೋ.

**ಗುರು:**—ಮಾರವಾಡೀ, ಮತ್ತೂ ಬದುಕಿಕೊಳ್ಳಲು ಬೇಡಿಕೊಂಬುವೆಯಾ?

ನೀನು ಬದುಕಿದರೆ ಇನ್ನೆಷ್ಟು ಜನರ ಪ್ರಾಣಕ್ಕೆ ಸಂಚಕಾರವನ್ನು ಕೊಡುವಿಯೋ? ಆದುದರಿಂದ ನೀನು ಉರುಲುಹಾಕಿಕೊಳ್ಳಲು ಈ ಮಹಾಪ್ರಭುಗಳ ಅಪ್ಪಣೆಯನ್ನು ಕೇಳಬಾರದೇ ?

**ಶೂಲಕ್:—** ಸ್ವಾಮೀ ಹಣವೆಲ್ಲ ಹೋದಬಳಿಕ ನಾನು ಹೆಣಕ್ಕಿಂತಲೂ ಕಡೆಯಾಗುವೆನು. ಆದುದರಿಂದ ನನ್ನ ಹಣವು ಅನ್ಯರ ಪಾಲಾದ ಮೇಲೆ ನಾನು ಇದ್ದರೇನು ಸತ್ತರೇನು ?

**ಅರಸು:—**ಶೂಲಕ್‌ಚಂದ, ಇಕೋ, ನಮಗೂ ನಿನಗೂ ಇಷ್ಟೇ ತಾರತಮ್ಯವು. ನಾವು ನಿನ್ನನ್ನು ಎಷ್ಟುಪರಿ ಬೇಡಿಕೊಂಡರೂ ನಿನಗೆ ಕಾರುಣ್ಯವು ಹುಟ್ಟಲಿಲ್ಲ. ಆದರೆ ನೀನು ನಮ್ಮನ್ನು ಕೇಳುವ ಮುನ್ನವೇ ನಿನಗೆ ಪ್ರಾಣದಾನವನ್ನು ಕೊಡುವೆವು. ಇನ್ನುಮುಂದೆ ಮಾತ್ರ ಇಂತಹ ಅನ್ಯಾಯದ ಗೋಜಿಗೆ ಹೋಗಬೇಡೆಂದರಾಯಿತು !

**ಅನಂತ:—**ದೇವಾ! ಈ ಮಾರವಾಡಿಯ ಅನ್ಯಾಯಾರ್ಜಿತವಾದ ವಿತ್ತವು ನನಗೆ ಬೇಡವೇ ಬೇಡ. ಆದುದರಿಂದ ಇವನ ಹಣದಲ್ಲಿಯ ಅರ್ಧಭಾಗವನ್ನು ಇವನ ಉಪಜೀವನಕ್ಕಾಗಿ ಕೊಟ್ಟು, ಉಳಿದ ಅರ್ಧ ಹಣವನ್ನು ಧರ್ಮಶಾಲೆ, ವೈದ್ಯಶಾಲೆಗಳನ್ನು ಸ್ಥಾಪಿಸುವದರಲ್ಲಿ ವಿನಿಯೋಗಿಸಬಹುದು.

**ಶೂಲಕ್:—**ದೇವಾ ! ನನ್ನ ಅತ್ಯಾಶೆಯೇ ಗತಿಗೆಡಿಸಿತು. ದುರ್ಬುದ್ಧಿಯೇ ದುಷ್ಪರಿಣಾಮವನ್ನು ಭೋಗಿಸಹಚ್ಚಿತು. ನಿಮ್ಮೆಲ್ಲರಂತೆ ನಾನೂ ಉದಾರಬುದ್ಧಿಯುಳ್ಳವನಾಗಿದ್ದರೆ ಇಂತಹ ಕಷ್ಟಗಳಿಗೆ ಗುರಿಯಾಗುತ್ತಿದ್ದಿಲ್ಲ. ಇನ್ನುಮುಂದೆ ನಾನೆಂದಿಗೂ ದುಷ್ಟಪ್ರವರ್ತನೆಯಲ್ಲಿ ಸೇರದೆ ಸಕಲರಲ್ಲಿ ಸ್ನೇಹವ ಬೆಳಸಿ ಸಹಾನುಭೂತಿಯಿಂದಲೂ ಭೂತದಯೆಯಿಂದಲೂ ವರ್ತಿಸುವೆನು. ಅನಾಥರಲ್ಲಿ ದಯೆಯನ್ನು ತೋರುವೆನು. ಇನ್ನು ಮುಂದೆ ದುಗಣೀ ಬಡ್ಡಿಯೇಕೆ? ದುಗ್ಗಾಣೀ ಬಡ್ಡಿಯನ್ನು ಸಹ ತೆಗೆದುಕೊಳ್ಳುವದಿಲ್ಲೆಂದು ಪ್ರಮಾಣವನ್ನು ಮಾಡುವೆನು. ಅಲ್ಲಲ್ಲ! ಮರೆತೆನು! ನನಗೇಕೆ ಇನ್ನು ಈ ದುಡ್ಡಿನ ವ್ಯವಹಾರದ ಮಾತು! ದೊರೆಗಳೇ ತಮ್ಮ ಮುಂದೆ ಪ್ರಮಾಣಪುರಃಸರವಾಗಿ ವಿಜ್ಞಾಪಿಸುವೆನು! ಅನಂತಶ್ರೇಷ್ಠಿಯು ಹೇಳಿದಂತೆ ನನ್ನ ಆಸ್ತಿಯ ಅರ್ಧಭಾಗವನ್ನು ಧರ್ಮಾರ್ಥವಾಗಿ ಉಪಯೋಗಿಸಲು ನನ್ನದೇನೂ ಅಭ್ಯಂತರವಿಲ್ಲ ! ಇನ್ನು ಉಳಿದ ಅರ್ಧವನ್ನಾದರೂ ನಾನು ತೆಗೆದುಕೊಂಡು ಏನು ಮಾಡಲಿ ? ಇದ್ದ ಒಬ್ಬ ಮಗಳು...-ಅಯ್ಯೋ ! ( ಬಿಕ್ಕಿ ಬಿಕ್ಕಿ ಅಳಹತ್ತುವನು. )

**ಅರಸು**:—ಯಾಕಯ್ಯಾ, ಶೂಲಕ್‌ಚಂದ,ಯಾಕೆ ಅಳುವೆ? ಹೇಳಬಾರದೇ?

**ಶೂಲಕ್**:—ಪ್ರಭುಗಳೇ, ಆ ಉಳಿದ ಅರ್ಧವನ್ನು ನನ್ನ ಮಗಳಿಗೆ ಕೊಟ್ಟುಬಿಡಬೇಕೆಂಬುದೇ ನನ್ನ ಇಚ್ಛೆ! ಆದರೆ ಆ ಮಗಳು ನನ್ನ ಬಳಿಯಲ್ಲಿಲ್ಲ! ಇಗೋ ಈ ಗುರುಪ್ರಸಾದನು ಮೋಸದಿಂದ ಅವಳನ್ನು ಓಡಿಸಿಕೊಂಡು ಹೋಗಿದ್ದಾನೆ. ದೊರೆಗಳೇ, ನಿಜವಾಗಿಯೂ ನಾನೇ ನೀಚನು! ಹಿಂದಿನದೆಲ್ಲವನ್ನೂ ನೆನೆಸಿದರೆ ಅತ್ಯಂತಪಶ್ಚಾತ್ತಾಪವಾಗುವದು! ಆದರೆ ಮಾಡುವದೇನು? ನೀಚನಾದ ನಾನು ಹೊಟ್ಟೆಯ ಕರುಳಾದ ಆ ಕಂದಮ್ಮನನ್ನು ಮುದ್ದಿನ ಆಶೆಯಿಂದ ಮುದಿಹದ್ದಿನ ಕೊರಳಲ್ಲಿ ಗಂಟುಹಾಕಲು ಹವಣಿಸಿದ್ದೆನು. ಸಾಧ್ವಿಯಾದ ನನ್ನ ಮಗಳು ನನ್ನ ಮನೆಯಿಂದ ಒಂದು ಒಡಕ ಕವಡಿಯನ್ನು ಕೂಡ ಒಯ್ಯಲಿಲ್ಲ! ಹೀಗಿದ್ದರೂ ಅವಳು ಹೊರಟುಹೋದ ಸುದ್ದಿ ತಿಳಿದ ಕೂಡಲೆ ಅನೇಕದುಷ್ಕಲ್ಪನೆಗಳನ್ನು ಮಾಡಿದೆನು. ಅವಳು ಹೋದರೂ ಹೋಗಲೆಂದು ದುಡ್ಡಿಗಾಗಿ ಚಡಪಡಿಸಿದೆನು. ಅಯ್ಯೋ! ನಾನೆಂತಹ ಪಾಪಿ! ಮಗಳೇ, ನಿನಗೆ ನನ್ನ ಅನಂತಾಶೀರ್ವಾದಗಳು! ಎಲ್ಲಿಯಾದರೂ ಸುಖಿಯಾಗಿರು! ಗುರುಪ್ರಸಾದ! ನನ್ನ ಬಳಿಯಲ್ಲಿದ್ದಾಗ ಬಿರುನುಡಿಗಳಿಂದ ನಿನ್ನನ್ನು ನೋಯಿಸಿದೆನು. ಕಠೋರವಾದ ಆಜ್ಞೆಯನ್ನು ಮಾಡಿದನು. ಇಷ್ಟೇ ಅಲ್ಲ, ನನ್ನ ಮಗಳೂ ನೀನೂ ಓಡಿಹೋದಾಗ ಹಲವು ವಿಧದಿಂದ ನಿನ್ನ ವಿಷಯದಲ್ಲಿ ಬೆಂಕಿಯನ್ನು ಕಾರುತ್ತಿದ್ದೆನು. ಆದರೆ ಈಗ ನನಗೆ ಪೂರ್ಣಪಶ್ಚಾತ್ತಾಪವಾಗಿದೆ! ನಿನ್ನನ್ನೂ ನನ್ನ ಮಗಳನ್ನೂ ಕ್ಷಮಿಸಿದ್ದೇನೆ! ಅಲ್ಲಲ್ಲ! ನೀವಿಬ್ಬರೂ ನಿಜವಾಗಿ ನನ್ನನ್ನು ಕ್ಷಮಿಸಬೇಕು! ದೊರೆಗಳೇ, ಇದಿಷ್ಟು ಬಡವನ ವಿಜ್ಞಾಪನೆಯನ್ನು ಮನ್ನಿಸಬೇಕು!

**ಅರಸು**:—ಏನಿದು? ಪೂರ್ಣಸಮಾಚಾರವು ತಿಳಿಯಲಿಲ್ಲವಲ್ಲ!

**ಅನಂತ**:—ದೊರೆಗಳೇ, ಲಾಲಿಸಬೇಕು. ಈ ಮಾರವಾಡಿಯ ಮಗಳಾದ ಶಶಿಕಲೆಯು ನಮ್ಮ ಈ ಗುರುಪ್ರಸಾದರನ್ನು ಪ್ರೀತಿಸಿ, ತಂದೆಯು ಸಮ್ಮತಿಸಲಾರನೆಂಬ ಭೀತಿಯಿಂದ, ಮನೆಬಿಟ್ಟು ಬಂದು ಅವರನ್ನೇ ಲಗ್ನವಾಗಿ ಸುಖದಿಂದಿದ್ದಾಳೆ!

**ವಸಂತ**:—ಶೂಲಕ್‌ಚಂದ, ನೀನು ಸ್ವಲ್ಪವೂ ಚಿಂತಿಸಬೇಡ. ನಿನ್ನ ಇಷ್ಟದಂತೆ ಗುರುಪ್ರಸಾದನು ನಿನಗೆ ಇನ್ನು ಮುಂದೆ ಅನುಕೂಲನಾಗಿ ಇರುವಂತೆ ಮಾಡುವದಕ್ಕೆ ಇಗೋ ಮಹಾರಾಜರ ಸಮ್ಮುಖದಲ್ಲಿ ವಚನ ಕೊಡುವೆನು!

**ಶೂಲಕ್**:—ಮಹಾರಾಯರೇ, ತಮ್ಮೆಲ್ಲರ ಸರಲಹೃದಯವನ್ನೂ ಉದಾರಮನಸ್ಸನ್ನೂ ನೋಡಿ ನಿಜವಾಗಿ ನನಗೆ ನಾಚಿಕೆಯಾಗುತ್ತದೆ. ಇರಲಿ.

ಆದದ್ದು ಆಗಿಹೋಯಿತು. ಇನ್ನು ಮುಂದೆ ನಾನು 'ಜಯಗೋಪಾಳ' ಎನ್ನುತ್ತ ಬಾಲಾಜಿಯ ಧ್ಯಾನಸೇವೆಗಳಲ್ಲಿ ಕಾಲಕಳೆಯುತ್ತ ಶಕ್ಯವಿದ್ದಷ್ಟು ಜನ್ಮಸಾಫಲ್ಯ ವನ್ನು ಮಾಡಿಕೊಳ್ಳಬೇಕೆನ್ನುವೆನು. ದಯಮಾಡಿ ನನ್ನ ಮಗಳನ್ನು ನನಗೆ ಭೆಟ್ಟಿ ಮಾಡಿಸಿರಿ. ಅವಳಿಗಷ್ಟು ನನ್ನ ಹೃದಯವನ್ನು ಬಿಚ್ಚಿ ಹೇಳುವೆನು. ನನ್ನ ಆಸ್ತಿಯ ಅರ್ಧಭಾಗವನ್ನು ಗುರುಪ್ರಸಾದರೇ, ನೀವು ಆನಂದದಿಂದ ಸ್ವೀಕರಿಸಿ ನನ್ನನ್ನು ಧನ್ಯನನ್ನಾಗಿ ಮಾಡಬೇಕು.

**ಅರಸು:**—ಸರಿ. ಎಲ್ಲವೂ ಒಳಿತಾಯಿತು. ಅನಂತಶ್ರೇಷ್ಠೀ, ವಸಂತ ಕುಮಾರ, ಈ ಮಾರವಾಡಿಯು ನಿಮಗೆ ಇನ್ನು ಅನ್ಯನಲ್ಲ. ಅವನ ಹೇಳಿಕೆ ಯನ್ನು ನಡೆಯಿಸುವದು ನಿಮ್ಮ ಕೆಲಸವು.

**ಅನಂತ** ಮತ್ತು **ವಸಂತ:**—ಅಪ್ಪಣೆ. ದೊರೆಗಳ ಚಿತ್ತದಂತೆ ವರ್ತಿಸಲು ಬದ್ಧರಾಗಿದ್ದೇವೆ.

**ಶೂಲಕ್:**—ಆಹಾ! ನಾನು ಧನ್ಯನು! ಅನಂತಶ್ರೇಷ್ಠೀ, ವಸಂತಕುಮಾರ, ಗುರುಪ್ರಸಾದ, ನೀವೆಲ್ಲರೂ ನನಗೆ ಪರಮಾಪ್ತರು! ಒಮ್ಮೆ ಪ್ರೀತ್ಯಾಲಿಂಗನವನ್ನು ಕೊಟ್ಟು ಈ ಮುದುಕನಿಗೆ ಸಂತೋಷವನ್ನುಂಟು ಮಾಡಿರಿ !

(ಎಲ್ಲರೂ ಪರಸ್ಪರವಾಗಿ ಆಲಿಂಗಿಸುವರು)

**ಅರಸು:**—ನಮ್ಮ ಕಾರ್ಯಭಾಗವು ಪೂರೈಸಿದಂತಾಯಿತು ! ವಸಂತ ಕುಮಾರ ! ನಿನ್ನ ಸ್ನೇಹಿತನ ಪ್ರಾಣವನ್ನುಳಿಸಿದ ಈ ತರುಣ ನ್ಯಾಯವಾದಿಗೆ ತಕ್ಕ ಮನ್ನಣೆಯನ್ನು ಮಾಡಿ, ಗೌರವಿಸುವದು ನಿನ್ನ ಕೆಲಸವು. ನೀವೆಲ್ಲರೂ ಇನ್ನು ಮುಂದಿನ ಕಾರ್ಯವನ್ನು ಕೈಕೊಳ್ಳಬಹುದು. (ಪ್ರಭಾವತಿಗೆ) ವಿಜಯೇಂದ್ರಕು ಮಾರ! ನಿನ್ನ ಬುದ್ಧಿಕೌಶಲ್ಯವನ್ನು ಎಷ್ಟುಪರಿ ಕೊಂಡಾಡಿದರೂ ತೀರದು! ನಮಗೆ ಬಹುಹರ್ಷವಾಯಿತು. ನಿನಗೆ ಸರ್ವೇಶ್ವರನು ಆಯುರಾರೋಗ್ಯವನ್ನು ಕೊಟ್ಟು ಸಂರಕ್ಷಿಸಲಿ! ಬಾಲಸರದಾರರಿಗೆ ನಮ್ಮ ವಂದನೆಗಳನ್ನು ಹೇಳು. [ಹೋಗುತ್ತಾರೆ.



## ೨ನೆಯರಂಗ–ರಾಜಸಭೆಯ ಮುಂದಿನ ಬಯಲು

(ವಸಂತಕುಮಾರ, ಅನಂತಶ್ರೇಷ್ಠಿ, ಮತ್ತು ನ್ಯಾಯವಾದಿವೇಷದ ಪ್ರಭಾವತಿ ಇವರು ಬರುತ್ತಾರೆ.)

**ವಸಂತ:**—(ಕೈಜೋಡಿಸಿ) ದೇವಾ ! ನೀನು ನನ್ನ ಪ್ರಿಯಮಿತ್ರನ ಪ್ರಾಣ ದಾತನು. ನನಗೆ ಅನಂತಾನಂತ ಸೌಖ್ಯಪ್ರದಾತನು. ನೀನು ನನಗೆ ಮಾಡಿದ ಉಪ

ಕಾರವನ್ನು ಈ ಜನ್ಮದಲ್ಲಿ ತೀರಿಸಲಾರೆನು. ಆದರೂ ಶೂಲಕ್‌ಚಂದನಿಗೆ ಕೊಡಲು ತಂದ ಈ ಮೂರುಸಾವಿರ ರೂಪಾಯಿಗಳನ್ನು "ಪತ್ರಂ ಪುಷ್ಪಂ ಫಲಂ ತೋಯಂ" ಎಂಬಂತೆ ಸ್ವೀಕರಿಸಿ ನಮ್ಮನ್ನು ಪುನೀತರನ್ನಾಗಿ ಮಾಡಬೇಕು.

**ಅನಂತ**:—ಆದರೆ ಇಷ್ಟರಿಂದಲೇ ನಮ್ಮ ಕೃತಜ್ಞತೆಯು ಮುಗಿಯಲಿಲ್ಲ! ಯಾವಜ್ಜೀವನವೂ ನಾವು ನಿಮಗೆ ಋಣಿಯಾಗಿರುವೆವು.

**ಪ್ರಭಾ**:—ರಾಜಕುಮಾರರೇ ! ನಿಮ್ಮ ಪ್ರಿಯಮಿತ್ರನ ಪ್ರಾಣ ಉಳಿದುದರಿಂದ ಆದ ಸಂತೋಷವೇ ನನಗೆ ಪರಮಸನ್ಮಾನವು ! ಇದಕ್ಕಿಂತಲೂ ಹೆಚ್ಚಿನ ಸಂತೋಷವು ನನಗೆ ಆವುದರಿಂದಲೂ ಆಗಲಾರದು ! ಹಣದಿಂದ ಯಾರನ್ನೂ ತೃಪ್ತಿಬಡಿಸುವದು ಸಾಧ್ಯವಿಲ್ಲ. ನನ್ನ ಉಪಕಾರವನ್ನು ನೀವು ಸ್ಮರಿಸುತ್ತಿದ್ದರೆ ಸಾಕು. ನನಗೆ ಹೋಗಿ ಬರಲು ಅಪ್ಪಣೆಯನ್ನು ಕೊಡಿರಿ.

**ವಸಂತ**:—(ಅಡ್ಡಗಟ್ಟಿ) ದಯಾಸಾಗರಾ ! ಇದು ನಿಮ್ಮ ಗೌರವಕ್ಕೆ ತಕ್ಕ ಬಹುಮಾನವಲ್ಲವೆಂದು ಇದನ್ನು ನಿರಾಕರಿಸಬಾರದು ! ಕೊನೆಗೆ ನಮ್ಮ ನೆನಪಿನ ದೆಶೆಯಿಂದಾದರೂ ನೀವು ಈ ಅಲ್ಪವಾದ ಕಾಣಿಕೆಯನ್ನು ಪರಿಗ್ರಹಿಸಬೇಕು. ಇಲ್ಲದಿದ್ದರೆ ನಮ್ಮ ಮನಸಿಗೆ ಬಲು ಅಸಮಾಧಾನವಾಗುವದು.

**ಪ್ರಭಾ**:—ಇಷ್ಟು ಪರಿಯಿಂದ ನೀವು ನನ್ನನ್ನು ನಿರ್ಬಂಧಪಡಿಸುವದರಿಂದ ನನ್ನ ಯತ್ನ ಮೀರಿತು. ಅನಂತಶ್ರೇಷ್ಠೀ, ನಿನ್ನ ಕರವಸ್ತ್ರವನ್ನು ಇತ್ತ ತಾ· ಅದನ್ನು ನಿನ್ನ ಜ್ಞಾಪಕದ ದೆಶೆಯಿಂದ ಇಟ್ಟುಕೊಳ್ಳುವೆನು. ಇನ್ನು ಈ ಜಹಗೀರುದಾರರು ತಮ್ಮ ಕರದಲ್ಲಿರುವ ಆ ಅಂಗುಲೀಯಕವನ್ನು ಕೊಟ್ಟರೆ ಸಾಕು ! ಸಂತೋಷದಿಂದ ಪರಿಗ್ರಹಿಸುವೆನು. (ಉಂಗುರವನ್ನು ತೆಗೆಯು ಹೋಗಲು ವಸಂತನನು ಕೈ ಹಿಂದಕ್ಕೆ ತೆಗೆಯುವನು.) ಇದು ಏನು ? ಕೈ ಹಿಂದಕ್ಕೆ ತೆಗೆಯುವಿರಿ ! ಇದನ್ನಲ್ಲದೆ ನಾನು ಬೇರೆ ಬಹುಮಾನವನ್ನು ಒಲ್ಲೆನು.

**ವಸಂತ**:—ಭದ್ರಾ ! ಇಂತಹ ಅಲ್ಪ ಬೆಲೆಯುಳ್ಳ ಪದಾರ್ಥವನ್ನು ನಿಮ್ಮಂಥ ಮಹನೀಯರಿಗೆ ಕೊಡುವದಕ್ಕೆ ನನಗೆ ನಾಚಿಕೆಯಾಗುವದು. ಆದುದರಿಂದ ನಿಮ್ಮ ಗೌರವಕ್ಕೆ ತಕ್ಕದ್ದನ್ನು ಪರಿಗ್ರಹಿಸಬೇಕು.

**ಪ್ರಭಾ**:—ನನಗೆ ಬೇರೆ ಪದಾರ್ಥವು ಬೇಡ. ಇದರ ಮೇಲೆ ನನಗೇ ತಕ್ಕೋ ಮೋಹವು ಅಂಕುರಿಸಿದೆ. ಕೊಡುವದಾದರೆ ಇದನ್ನೇ ಕೊಡಿರಿ. ಇದನ್ನು ಕೊಟ್ಟರೇ ನನಗೆ ಅಧಿಕ ಸಂತೋಷವಾಗುವದು.

**ವಸಂತ**:— ಮಹಾಶಯಾ ! ಇದನ್ನು ತಮಗೆ ಕೊಡಲು ನನಗೆಷ್ಟು

ಮಾತ್ರವೂ ಸಂಕೋಚವಿಲ್ಲ. ಆದರೆ ಇದು ವಿವಾಹಕಾಲದಲ್ಲಿ ನನ್ನ ಪ್ರಿಯಸತಿಯಿಂದ ಬಂದದ್ದು; ಇದನ್ನು ಅನ್ಯರಿಗೆ ಎಂದೂ ಕೊಡಬಾರದೆಂಬದು ವಂಶಪರಂಪರೆಯಿಂದ ನಡೆದು ಬಂದ ಕಟ್ಟಳೆಯಾಗಿದೆ. ಆದುದರಿಂದ ನಾನು ಬೆಲೆಯಲ್ಲಿ ಇದಕ್ಕಿಂತಲೂ ಹಿರಿದಾದ ಬೇರೆ ಉಂಗುರವನ್ನು ತರಿಸಿ ಕಳಿಸುವೆನು.

**ಪ್ರಭಾ:**—ಸರಿ! ಸರಿ! ಇಂತಹ ಮೂರ್ಖಸಮಾಧಾನಗಳಿಗೆ ಏನು ಕೊರತೆ? ಮೊದಲು ನೀವೇ ನನ್ನನ್ನು ಕೇಳೆಂದು ಬಲವಂತ ಮಾಡಿದಿರಿ. ಈಗ ಕೇಳಿದರೆ ಇಲ್ಲೆನ್ನುವದರ ಬದಲಾಗಿ ಸಮಾಧಾನಗಳನ್ನು ಹೇಳುವಿರಿ ! ಒಂದುವೇಳೆ ನಿಮ್ಮ ಪ್ರಿಯಸತಿಯು ಕೇಳಿದರೆ, ನನಗೆ ಕೊಟ್ಟೆನೆಂದ ಮಾತ್ರಕ್ಕೆ ಆ ಸಾಧ್ವೀಮಣಿಯು ಎಂದಿಗೂ ಆಕ್ಷೇಪಿಸಳು. ಆಗಲಿ. ನಿಮ್ಮ ಕರುಣವಿದ್ದರೆ ಸಾಕು. ನಾನು ಹೋಗಿ ಬರುವೆನು. [ ಹೋಗುತ್ತಾಳೆ.

**ಅನಂತ:**—ಮಿತ್ರಾ! ನನ್ನ ಮನಸ್ಸಂತೋಷಕ್ಕಾಗಿಯಾದರೂ ನಿನ್ನ ಉಂಗುರವನ್ನು ನನ್ನ ಪ್ರಾಣದಾತನಿಗೆ ಕೊಟ್ಟು ಕಳುಹಿಸಿ ಆತನ ಮನಸ್ಸನ್ನು ಸಂತೋಷಬಡಿಸು. ನಿನ್ನ ಸತಿಯ ಆಗ್ರಹಕ್ಕೆ ನಾನಾದರೂ ಭಾಗಿಯಾಗುವೆನು.

**ವಸಂತ:**— ಗುರುಪ್ರಸಾದ! ನೀನು ಈಗಳೆ ಈ ಉಂಗುರವನ್ನು ಒಯ್ದು ನಮ್ಮ ನ್ಯಾಯವಾದಿಯಾದ ಆ ವಿಜಯೇಂದ್ರನಿಗೆ ಕೊಟ್ಟು ಬಾ ಹೋಗು.

[ಗುರುಪ್ರಸಾದನು ಹೋಗುತ್ತಾನೆ.]

**ಅನಂತ:**—ವಯಸ್ಯಾ! ನಾನು ಈಗ ನಿನ್ನಿಂದ ಅಪ್ಪಣೆಪಡೆದು ನನ್ನ ಮಂದಿರಕ್ಕೆ ಹೋಗುವೆನು. ಸಾಯಂಕಾಲದ ಸಮಯಕ್ಕೆ ತಪ್ಪದೆ ಬಂದು ನಿಮ್ಮೆಲ್ಲರನ್ನು ಕಲೆತುಕೊಳ್ಳುವೆನು. ಆ ಹೊತ್ತಿಗೆ ಶೂಲಕ್ ಚಂದನು ಮೊದಲೇ ಗೊತ್ತಾದಂತೆ ಅಲ್ಲಿಗೆ ಬರುವನು. ನಾನಿನ್ನು ಬರುವೆನು. [ ಹೋಗುತ್ತಾನೆ.

( ಗುರುಪ್ರಸಾದನು ತಿರುಗಿಬರುತ್ತಾನೆ )

**ವಸಂತ:**—ಉಂಗುರವನ್ನು ಕೊಟ್ಟು ಬಂದೆಯಾ ?

**ಗುರು:**—ಆರ್ಯಾ ! ನಿಮ್ಮ ಉಂಗುರವನ್ನು ಕೊಟ್ಟು ಬರುವ ಸಂದರ್ಭದಲ್ಲಿ ನನ್ನ ಉಂಗುರವನ್ನೂ ಕಳೆದುಕೊಂಡು ಬಂದೆನು.

**ವಸಂತ:**—ಅದು ಯಾಕೆ ?

**ಗುರು:**—ಮತ್ತೇನು ಮಾಡಲಿ ? ನಾನು ಉಂಗುರವನ್ನು ಆ ವಿಜಯೇಂದ್ರನಿಗೆ ಕೊಡುವ ಸಮಯದಲ್ಲಿ ಆತನ ವಿಲೇಖಕನು ನನ್ನನ್ನು ಕಾಡಿಸಿ ಪೀಡಿಸಿ ನನ್ನ ಉಂಗುರವನ್ನೂ ತನ್ನ ಬಹುಮಾನವೆಂದು ಸೆಳೆದುಕೊಂಡು ಬಿಟ್ಟನು. ಇನ್ನು

ಮನೆಗೆ ಹೋದಮೇಲೆ ನನ್ನಗತಿ ಏನಾಗುವದೋ ನೋಡಬೇಕು ! ಅದನ್ನು ನನ್ನ ಪ್ರಿಯತಮೆಯು ತನ್ನ ಪ್ರೇಮದ ಕುರುಹೆಂದು ನನಗೆ ಕೊಟ್ಟಿದ್ದಳು ! ಮತ್ತು ನಾನಾದರೂ ಎಂತಹ ಪ್ರಸಂಗದಲ್ಲಿಯೂ ಅದನ್ನು ಅನ್ಯರಿಗೆ ಕೊಡುವದಿಲ್ಲೆಂದು ವಚನಕೊಟ್ಟಿದ್ದೆನು.

**ವಸಂತ:**—ಹೋಗಲಿ ಬಿಡು. ನೋಡೋಣವಂತೆ. ಇನ್ನು ನಾವು ಸತ್ವರದಿಂದ ನಮ್ಮ ಮಂದಿರಕ್ಕೆ ಹೋಗುವ ನಡೆ. ಅನಂತ ಶ್ರೇಷ್ಠಿಯೂ ನಿಮ್ಮ ಮಾವನೂ ಸಾಯಂಕಾಲಕ್ಕೆ ಬರತಕ್ಕವರಿದ್ದಾರಲ್ಲವೇ? ಬೇಗನೆ ನಡೆ. [**ಹೋಗುತ್ತಾನೆ**



## ಐದನೆಯ ಅಂಕವು



### ೧ ನೆಯ ರಂಗ-ಪ್ರಭಾವತಿಯ ಮಂದಿರ

**ಪ್ರಭಾವತೀದೇವಿಯು ರಾಗದಪೆಟ್ಟಿಗೆಯನ್ನು ಬಾರಿಸುತ್ತ ಗಾಯನ ಮಾಡುತ್ತ ಕುಳಿತಿರುತ್ತಾಳೆ. ಶಶಿಕಲೆಯು ಅಲ್ಲಿಯೇ ನಿಂತಿರುತ್ತಾಳೆ.**

**ಶಶಿಕಲೆ:**—ಅಹಾ ! ಇಂದಿನ ದಿನವೇ ಸುದಿನವು. ನನ್ನ ವೈವಾಹಿಕ ಸಮಾರಂಭವು ನಿಜವಾಗಿ ಇಂದಿನ ರಾತ್ರಿ ಸಂಪೂರ್ಣವಾದಂತಾಗುವದು. ನನ್ನ ಪ್ರಿಯತಮನು ತನ್ನ ಪ್ರಾಣಸ್ನೇಹಿತನಿಗೆ ಒದಗಿದ ಸಂಕಟವನ್ನು ಪರಿಹರಿಸಿ ಕೊಂಡು ತನ್ನ ಮಿತ್ರಮಂಡಲಿಯೊಡನೆ ಈಗಲೇ ಬರುವನು. ನನ್ನ ತಂದೆಯಾದರೂ ದುರ್ಭಾವನೆಯನ್ನು ಬಿಟ್ಟು ಸಹೃದಯನಾದನು. ನನ್ನ ಒಡಹುಟ್ಟಿದ ಅಕ್ಕನಿಗೆ ಸರಿಯಾದ ಪ್ರಭಾವತಿಯೂ, ಅವಳ ಪ್ರಾಣಪತಿಯೂ ಅಸಮಸಂತೋಷದಲ್ಲಿರುವರು. ಹೀಗೆ ಎಲ್ಲರೂ ಆನಂದಸಾಗರದಲ್ಲಿ ಈಸಾಡಹತ್ತಿದ್ದೇವೆ. ಅವರೆಲ್ಲರೂ ಬರುವ ಹೊತ್ತಿಗೆ ಮೃದುಮಧುರವಾದ ಸಂಗೀತವು ಪ್ರಾರಂಭಿಸಲ್ಪಡಲಿ. ಹೊರಗೆ ಕೌಮುದಿಯು ಮನಕ್ಕೆ ಆನಂದವನ್ನು ಈಯುತ್ತ ಶೋಭಿಸುವದು. ಪುಷ್ಪದ ಪರಿಮಳದಿಂದ ಕೂಡಿ ಬೀಸುವ ಮಂದಮಾರುತನು ನಿಶ್ಶಬ್ದವಾದ ಈ ರಾತ್ರಿಕಾಲದ ಗಾನಕ್ಕೆ ಇಂಪುಗೊಡುವನು. ಆಕಾಶದಮೇಲೆ ವಜ್ರದ ತುಂಡುಗಳಂತೆ ಥಳಿಥಳಿಸುವ ತಾರಾಗಣಗಳು ಹೊಳೆಯುತ್ತಿರುವವು ! ಇಂತಹ ಸುಖಾನಂದಗಳ ಅನುಭೂತಿಯನ್ನು ಒದಗಿಸಿಕೊಟ್ಟ ಪರಮಾತ್ಮನನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ ಸರಿ ?

( **ಸೇವಕನು ಬರುತ್ತಾನೆ** )

**ಸೇವಕ:**—ದೇವೀ, ನಮ್ಮ ಜಹಗೀರದಾರರು ತಮ್ಮ ದಿವಾನರಾದ ಗುರು ಪ್ರಸಾದ ಮುಂತಾದ ಪರಿಜನರನ್ನೊಡಗೊಂಡು ಬರುತ್ತಿರುವರು.

**ಪ್ರಭಾ:**—ಆಗಲಿ. ನಮ್ಮ ಮಂದಿರವನ್ನು ದೀಪಾವಲಿಗಳಿಂದ ಅಲಂಕರಿಸಲು ಸೇವಕರಿಗೆ ಆಜ್ಞೆಯನ್ನು ಕೊಡು. (ವಸಂತಕುಮಾರಗುರುಪ್ರಸಾದರು ಬರುತ್ತಾರೆ.)

**ಪ್ರಭಾ:**—( ಎದ್ದು ) ಪ್ರಾಣನಾಥ. ನಿಮ್ಮ ಮಿತ್ರನಿಗಾದ ವಿಜಯವನ್ನು ಕೇಳಿ ನನಗೆ ಪರಮಾನಂದವಾಯಿತು. ನೀವು ನನಗೆ ಸೇವಕರಿಂದ ಕಳುಹಿಸಿದ ಪತ್ರಿಕೆಯು ಮುಟ್ಟುವದಕ್ಕೆ ಮುಂಚಿತವಾಗಿಯೇ ನನಗೆ ಈ ಸಂತೋಷವಾರ್ತೆಯನ್ನು ನನ್ನ ಚಾರರು ಬಂದು ಹೇಳಿದರು. ಆದರೆ ನೀವು ಬರುವಾಗ ನಿಮ್ಮ ಮಿತ್ರನೊಡನೆ ಬಾರದ ಕಾರಣವೇನು ?

**ವಸಂತ:**—ಪ್ರಾಣೇಶ್ವರೀ, ನನ್ನ ಮಿತ್ರನು ತನ್ನ ಪರಿಜನರಿಂದೊಡಗೂಡಿ ನಮ್ಮಿರ್ವರನ್ನು ಅಭಿನಂದಿಸಲು ಈಗಳೇ ಬರುವನು. ಮಾರವಾಡಿ ಶೂಲಕ್‌ಚಂದನನ್ನೂ ಕರೆತರುವನು.

**ಪ್ರಭಾ:**—ಪ್ರಿಯತಮಾ ! ಇದಲ್ಲವೇ ಸಾಧುಗಳ ಲಕ್ಷಣವು ? ಪ್ರೇಮವು ಜಯಿಸಲರಿಯದ ಪದಾರ್ಥವು ಈ ಭೂತಳವಲ್ಲಾವುದೂ ಇಲ್ಲ.

**ವಸಂತ:**—ಅಕೋ, ನಮ್ಮ ಸ್ನೇಹಿತರೆಲ್ಲರೂ ಬಂದೇ ಬಂದರು. ಬಾ ಅವರನ್ನು ಎದುರ್ಗೊಳ್ಳಲು ಹೋಗುವ. [ಎಲ್ಲರೂ ಹೋಗುತ್ತಾರೆ.

### ೨ನೆಯ ರಂಗ—ಪ್ರಭಾವತಿಯ ಅಂತರ್ಭವನ

(ಪ್ರಭಾವತಿಯೂ, ಶಶಿಕಲೆಯೂ ಬರುತ್ತಾರೆ.)

**ಪ್ರಭಾ:**—ಶಶಿಕಲೇ, ನಿನ್ನ ಒಡೆಯನನ್ನು ಒಡಗೂಡಿ ಬಂದ ಅತಿಥಿಗಳಿಗೆಲ್ಲ ಉಪಹಾರಾದಿಗಳನ್ನು ಸಿದ್ಧಬಡಿಸಿ ಉಪಚರಿಸುವಂತೆ ಪರಿಚಾರಕರಿಗೆಲ್ಲ ಆಜ್ಞೆಯನ್ನು ಮಾಡು. ನಮ್ಮ ಸಂಗೀತಶಾಲೆಯಲ್ಲಿ ಗಂಧಮಾಲ್ಯತಾಂಬೂಲಾದಿಗಳನ್ನು ಸಿದ್ಧಗೊಳಿಸಿ ಸಂಗೀತಗಾರರೂ ಸಿದ್ಧರಿರುವಂತೆ ವ್ಯವಸ್ಥೆಯನ್ನಿಡುವಂತೆ ನೋಡು. [ಅನಂತಶ್ರೇಷ್ಠಿ ಮುಂತಾದವರು ವಸಂತಕುಮಾರರೊಡನೆ ಬರುತ್ತಾರೆ.

**ಪ್ರಭಾ:**—ಮಹಾಶಯರೇ ! ನಿಮ್ಮೆಲ್ಲರಿಗೆ ಸ್ವಾಗತವು. ಬನ್ನಿರಿ. ಎಲ್ಲರೂ ಆಸನಗಳ ಮೇಲೆ ಉಪವಿಷ್ಟರಾಗಿ ಉಷ್ಣೋದಕದಿಂದ ನಿಮ್ಮ ಪಾದಪ್ರಕ್ಷಾಲನೆ ಮಾಡಿಕೊಂಡು, ಭೋಜನಶಾಲೆಗೆ ದಯಮಾಡಿರಿ. ಅಲ್ಲಿ ಸುಖಗೋಷ್ಠಿಗಳಿಂದ ನಾಲ್ಕು ಗಳಿಗೆ ಕಾಲವನ್ನು ಕಳೆಯುವಾ. ತರುವಾಯ ಸಂಗೀತಶಾಲೆಗೆ ದಯಮಾಡಬಹುದು.

**ಅನಂತ**:—ದೇವೀ, ನಿನ್ನ ವಿವಾಹಮುಹೂರ್ತದ ಬಲದಿಂದ ನನ್ನ ಪ್ರಾಣವು ಉಳಿಯಿತಲ್ಲದೆ ಶೂಲಕ್ಷಂದನು ಸಹ ನಮಗೆ ಪರಮಮಿತ್ರನಾದನು.

**ಪ್ರಭಾ**:—ಬರಿಯ ಮಿತ್ರನೆಂಬುವದೇತಕೆ ? ಆತನ ಪುತ್ರಿಯಾದ ನಮ್ಮ ಶಶಿಕಲೆಯು ನಿಮ್ಮ ಗುರುಪ್ರಸಾದರ ಮಡದಿಯಾದ ಬಳಿಕ ಅವಳ ಬಂಧುಗಳೆಲ್ಲ ನಮ್ಮ ಬಂಧುವರ್ಗದಲ್ಲಿ ಸೇರಿದಂತಾಯಿತು ! ಆದುದರಿಂದ ಆ ಶೂಲಕ್ಷಂದನನ್ನು ನಮ್ಮ ಗೃಹಕ್ಕೆ ಬಹುಮಾನಪೂರ್ವಕವಾಗಿ, ಆತನ ಆಪ್ತೇಷ್ಟರೊಡನೆ ಕರೆದುತಂದು ಆತನ ಮಗಳನ್ನು ಆತನ ಕಾಲ ಮೇಲೆ ಕೆಡಪಿ, ಈ ದಂಪತಿಗಳಿಗೆ ಆತನಿಂದ ಶೀರ್ವಾದವನ್ನು ಕೊಡಿಸಬೇಕು ಇರಲಿ. ಮಹಾಶಯಾ. ನೀನು ಸೂಚಿಸಿದ ್ರಕ್ಕಿಂತಲೂ ದೈವಬಲವು ಹೆಚ್ಚಿನದು ! ಮುಷ್ಯನು ಅಸ್ವತಂತ್ರನು. ಪರಮೇಶ್ವರನ ಅನುಗ್ರಹದಿಂದ ಎಲ್ಲವೂ ನಡೆಯುವದು. ಆದರೆ ಮನುಷ್ಯಪ್ರಯತ್ನವಿಲ್ಲದೆ ದೈವಸಾಹಾಯ್ಯವೆಂದಿಗೂ ಆಗದು.

**ವಸಂತ**:—ಈ ಬಾಂಧವದಿಂದ ನಮ್ಮ ಗುರುಪ್ರಸಾದನು ಲಕ್ಷಾಧೀಶನಾದನು.

**ಗುರು**:—ದೇವಾ, ಇದೆಲ್ಲವೂ ನಿಮ್ಮ ಸತೀಮಣಿಯ ಸೌಹೃದಭಾವದಿಂದ.

**ಪ್ರಭಾ**:—ಸೌಹೃದಭಾವಕ್ಕಿಂತಲೂ ನಿಮ್ಮ ಪ್ರಿಯಸತಿಯ ಅಸದೃಶ ಪ್ರಭಾವವೆಂದು ನೀವು ತಿಳಿದಿಲ್ಲವೇನು !

**ಗುರು**:—ದೇವಿ, ನೀವೇ ಹೀಗೆನ್ನಹತ್ತಿದರೆ ನಾನೇನು ಮಾತನಾಡಲಿ ?

**ಪ್ರಭಾ**:—ಮಾತನಾಡದೆ ಇರುವದೂ ಒಪ್ಪಿಗೆಯ ಲಕ್ಷಣವಲ್ಲವೇ ? ಆರ್ಯ ಅನಂತಶ್ರೇಷ್ಠೀ ! ನೀವೆಲ್ಲರೂ ಬಹು ಶ್ರಮಗೊಂಡಿರುವಿರಿ. ಭೋಜನವು ಸಿದ್ಧವಿರುವದು. ಭೋಜನಶಾಲೆಗೆ ಎಲ್ಲರೂ ದಯಮಾಡಬೇಕು. ಶೂಲಕ್ಷಂದ ಮಾರವಾಡಿಯು ಇನ್ನೂ ಏಕೋ ಬರಲಿಲ್ಲವಲ್ಲ. ಇಷ್ಟರಲ್ಲಿಯೇ ಬರಬಹುದು. ನಡೆಯಿರಿ. [ಪ್ರಭಾವತೀ ವಸಂತರ ಹಿಂದೆ ಎಲ್ಲರೂ ಹೋಗುತ್ತಾರೆ.]

(ಶಶಿಕಲಾಗುರುಪ್ರಸಾದರು ಬರುತ್ತಾರೆ)

**ಶಶಿಕಲೆ**:—ಪ್ರಿಯಾ ! ನಾನು ಇಂತಹ ಠಕ್ಕುಟಳ್ಳಿಯ ಮಾತುಗಳನ್ನು ಎಂದಿಗೂ ಕೇಳತಕ್ಕವಳಲ್ಲ. ನಂಬತಕ್ಕವಳೂ ಅಲ್ಲ. ಅಂತಹ ಶುಭಮುಹೂರ್ತ ಸಮಯದಲ್ಲಿ ನಮ್ಮಿರ್ವರ ಪ್ರೇಮಬಂಧನಸೂಚಕವಾಗಿ ಕೊಟ್ಟ ಉಂಗುರಕ್ಕೆ ಬೆಲೆ ಇರಲಿ, ಇರದಿರಲಿ ಅದನ್ನು ಇಷ್ಟು ಅಲ್ಪಾವಧಿಯಲ್ಲಿ ಅನ್ಯರ ಪಾಲು ಮಾಡಿ ಬರುವದು ನೀತಿಯಲ್ಲ !

**ಗುರು**:––ಮಹಾರಾಯಳೇ ! ನನ್ನದು ಮಹಾಪರಾಧವು. ಇಷ್ಟೇತಕೆ ಅರ್ಭಟಿಸಿ ಕೂಗುವಿ ? ಬಂದ ಗ್ರಹಸ್ಥರು ಕೇಳಿ ನಗುವಂತೆ ಸುಮ್ಮನೇ ರಗಳೆಯನ್ನೇ ತಕೆ ಮಾಡುವಿ ? ಪ್ರಮಾಣಮಾಡಿ ಹೇಳುವೆನು ! ಆ ನ್ಯಾಯವಾದಿಯ ಕುಳ್ಳ ವಿಲೇಖಕನು ತನ್ನ ಬಹುಮಾನವೆಂದು ನನ್ನನ್ನು ಪೀಡಿಸಿ ಕಾಡಿ ಬಲವಂತಮಾಡಿ ಆ ಉಂಗುರವನ್ನು ತೆಗೆದುಕೊಂಡನು !

**ಶಶಿಕಲೆ**:––ಅಹಹ! ಇದು ಎಲ್ಲಿಯಾದರೂ ನಂಬತಕ್ಕ ಮಾತೇ? ನಿಮ್ಮಂಥ ವರು ಹುರಿಗಡಲೆಗೆ ಪ್ರಮಾಣ ಮಾಡತಕ್ಕವರೇ ! ಆ ವಿಲೇಖಕನು ನಿಮ್ಮಂತೆ ಮೀಸೆಯಿದ್ದ ಗಂಡಸಾಗಿದ್ದರೆ ನಿಮ್ಮ ದರಿದ್ರ ಉಂಗರವನ್ನು ಬಹುಮಾನವಾಗಿ ಎಂದಿಗೂ ಪರಿಗ್ರಹಿಸುತ್ತಿದ್ದಿಲ್ಲ. ಹೆಂಡತಿಯ ಪ್ರೇಮಸೂಚಕವೆಂದು ಹೇಳಿ ದರೂ, ಅಂಗಿಕರಿಸುವವನು ಗಂಡಸೇ ? ಇದೆಲ್ಲ ನೀವು ಹುಟ್ಟಿಸಿ ಹೇಳುವ ಮಾತು!

**ಗುರು**:––ಪ್ರಿಯೇ, ನಿಜವಾಗಿಯೂ ಅವಳಿಗೆ ಮೀಸೆಗಳೇ ಇದ್ದಿಲ್ಲ. ನಿನ್ನ ಷ್ಟೇ ಎತ್ತರವಾಗಿದ್ದನು. ಮೈಕಟ್ಟೂ ನಿನ್ನಂತೆಯೇ ಇತ್ತು !

(ಪ್ರಭಾವತಿಯು ಬರುತ್ತಾಳೆ)

**ಪ್ರಭಾ**:––ಅಹಹ! ಏನು ಈ ವಿಪರೀತವು! ನಿಮ್ಮ ವಿವಾಹವಾಗಿ ಇನ್ನೂ ಎಂಟುದಿವಸಗಳಾದರೂ ಪೂರೈಸಲಿಲ್ಲ. ಆಗಲೇ ಗಂಡಹೆಂಡರ ಮಧ್ಯದಲ್ಲಿ ಇಷ್ಟು ರಗಳೆಯೇ ? ಶಶಿಕಲೇ, ಸಾಕು ಏಳೇ! ಬಂದ ಅತಿಥಿಗಳನ್ನು ಉಪಚರಿಸುವದನ್ನು ಬಿಟ್ಟು ನೀವೇ ಜಗಳಾಡುತ್ತ ನಿಂತುಕೊಂಡರೆ ಮುಂದೇನು ಗತಿ ?

**ಗುರು**:–ದೇವೀ ! ಇಂತಹ ಮೂರ್ಖಳಿಗೆ ನೀವಾದರೂ ತಿಳಿಹೇಳಬೇಕು. ಈ ದಿನ ನಮ್ಮ ಯಜಮಾನರ ಪ್ರಾಣದಾತನಾದ ಮಿತ್ರನ ಆ ನ್ಯಾಯವಾದಿಯ ವಿಲೇಖಕನಿಗೆ ಬಹುಮಾನವಾಗಿ ತಾನು ನನಗಿತ್ತ ಕಾಸು ಬಾಳದ ಉಂಗುರವನ್ನು ಕೊಟ್ಟೆನೆಂದು ಇಷ್ಟುಪರಿ ರಗಳೆಯನ್ನೆಬ್ಬಿಸಿರುವಳು.

**ಶಶಿಕಲೆ**:— ದೇವಿಯವರು ತಾವೇ ಹೇಳಬೇಕು. ನಾನು ಮೂರ್ಖ ಳಂತೆ ! ನಾನು ಪ್ರೀತಿಪೂರ್ವಕವಾಗಿ ಕೊಟ್ಟ ಉಂಗುರವು ಕಾಸು ಬಾಳಲಿ, ಕವಡಿ ಬಾಳಲಿ ಅವನ್ನು ಅನ್ಯರಿಗೆ ಕೊಡಬಹುದೋ ? ಆವದೋ ಬೆಲೆವೆಣ್ಣಿನ ಪಾಲುಮಾಡಿ ಬಂದು, ಈಗ ಮಾತ್ರ ಸಮಾಧಾನವನ್ನು ಹೇಳಿದರೆ ನಾನು ಕೇಳು ವೆನೇ ?

(ವಸಂತಕುಮಾರ ಅನಂತಶ್ರೇಷ್ಠಿ ಮುಂತಾದವರು ಬರುತ್ತಾರೆ.)

**ಪ್ರಭಾ**:—ಗುರುಪ್ರಸಾದ, ನೀವೇನಾದರೂ ಅನ್ನಿರಿ. ನಿಮ್ಮದು ಕೇವಲ ಅನ್ಯಾಯವು ! ಅಧರ್ಮವು ! ನಿಮ್ಮ ಕೈ ಹಿಡಿದು ಬಂದ ಮಡದಿಯಲ್ಲಿ ಇಷ್ಟಾದರೂ ಪ್ರೀತಿಯೂ ಗೌರವವೂ ಬೇಡವೇ ? ಅವಳು ಆ ಉಂಗುರುವನ್ನು ನಿಮಗೆ ಬೆಲೆ ಕಟ್ಟಿಸಲು ಕೊಡಲಿಲ್ಲವಷ್ಟೇ ? ನಾನೂ ನನ್ನ ಉಂಗುರವನ್ನು ನನ್ನ ಪ್ರಿಯನಿಗೆ ಕೊಟ್ಟಿದ್ದೇನೆ. ಯಾವಜ್ಜೀವನವೂ ಅದನ್ನು ಧರಿಸುವದೆಂದೂ ಅನ್ಯರಿಗೆ ಕೊಡಲಾಗದೆಂದೂ ಅವರಿಂದ ಪ್ರಮಾಣವನ್ನು ಮಾಡಿಸಿಕೊಂಡಿರುವೆನು. ಹೀಗಿರಲು ನೀವು ಇಂತಹ ದ್ರೋಹಚಿಂತನೆಯನ್ನು ಮಾಡಬಹುದೇ ?

**ಗುರು**:—ದೇವೀ, ಇದರಲ್ಲಿ ನನ್ನೊಬ್ಬನ ದ್ರೋಹಚಿಂತನೆಯಾದರೂ ಏನು ? ತಮ್ಮ ಪತಿರಾಜರೂ ಆ ನ್ಯಾಯವಾದಿಯ ನಿರ್ಬಂಧಕ್ಕೊಳಪಟ್ಟು ತಾವು ಕೊಟ್ಟ ಉಂಗುರವನ್ನೇ ಅವನಿಗೆ ಅರ್ಪಿಸಿದರು. ನಾನೇ ಅವನ್ನು ಕೊಟ್ಟು ಬಂದಿದ್ದೇನೆ.

**ಪ್ರಭಾ**:—ಗುರುಪ್ರಸಾದ, ಹಾಗೆಂದಿಗೂ ಜರುಗಿರಲಾರದು. ನೀವು ಸುಮ್ಮನೆ ಸುಳ್ಳುಬೊಬ್ಬಾಟ ಮಾಡುತ್ತೀರಿ ಇಷ್ಟೇ! ( ವಸಂತಕುಮಾರನ ಕಡೆಗೆ ತಿರುಗಿ) ಪ್ರಿಯಾ ಇದು ಇದು ಮಿಥ್ಯಾವಾದವಲ್ಲವೆ ? ನಾನು ಇದನ್ನು ನಂಬಬಹುದೇ ?

**ವಸಂತ**:—ಪ್ರಿಯತಮೇ, ಕ್ಷಮಿಸು. ನನ್ನದು ಶತಾಪರಾಧವು ! ಸಹಸ್ರಾಪರಾಧವು ! ಈ ತಪ್ಪು ಮಾಡಿದ್ದು ಸಾಲದೆ, ಇದಕ್ಕೆ ಸುಳ್ಳನ್ನೇತಕ್ಕೆ ಸೇರಿಸಲಿ ! ನೀನು ನನಗೆ ಎಂತಹ ಶಿಕ್ಷೆಯನ್ನಾದರೂ ವಿಧಿಸಬಹುದು !

**ಪ್ರಭಾ**:—ಸರಿ ಸರಿ ! ತಮ್ಮಂಥಹ ಶ್ರೀಮತ್ಕುಮಾರರಾದ ಜಹಗೀರದಾರರನ್ನು ನಾನು ದಂಡಿಸ ಬಲ್ಲೆನೇ ? ಆ ಉಂಗುರವು ಸಿಗುವವರೆಗೆ ನಾನು ಅನ್ನೋದಕವನ್ನು ತೊರೆಯುವೆನು. ತಾವು ನನ್ನ ಉಂಗುರವನ್ನು ಯಾರಿಗೆ ಕೊಟ್ಟು ಬಂದಿರೋ, ಅವರ ಸಂಗಡಲೇ ಲೋಲುಪ್ತಿಯಿಂದ ಚಕ್ಕಂದವನಾಡುತ್ತಿರಬಹುದು !

**ಗುರು**:—(ಮರೆಯಲ್ಲಿ) ಇವರಿಬ್ಬರ ಮಧ್ಯದಲ್ಲಿ ನಾನು ಬದುಕಿದೆನು !

**ಅನಂತ**:—ದೇವೀ, ಇದೆಲ್ಲವೂ ನನ್ನ ಅಪರಾಧವು ! ಈ ಅನರ್ಥದ್ವಯಕ್ಕೆ ನಾನೇ ಮೂಲಪುರುಷನು. ಆದುದರಿಂದ ಈ ಅಲೌಕಿಕಕಾರ್ಯವನ್ನು ಕ್ಷಮಿಸಬೇಕೆಂದು ನಿಮ್ಮಿರ್ವರನ್ನೂ ಅಂಜಲಿಬದ್ಧನಾಗಿ ಬೇಡಿಕೊಳ್ಳುವೆನು.

**ಪ್ರಭಾ**:—ಹಾಗಾದರೆ ಯತ್ನವಿಲ್ಲ. ಇನ್ನಾದರೂ ನಿಮ್ಮ ಸ್ನೇಹಿತರು ತಮ್ಮ ಪ್ರಿಯಸತಿಯರಿತ್ತ ಇಂತಹ ಪ್ರಿಯಸೂಚಕವಾದ ಪದಾರ್ಥಗಳನ್ನು

ಅನ್ಯಾಕ್ರಾಂತ ಮಾಡಬಾರದೆಂದು ಚೆನ್ನಾಗಿ ಬುದ್ಧಿಯನ್ನು ಹೇಳಿರಿ. [ ಪ್ರಭಾವತಿಯೂ ಶಶಿಕಲೆಯೂ ಉಂಗುರಗಳನ್ನು ತೋರಿಸುವರು. ]

**ವಸಂತ**:—(ಉಂಗುರವನ್ನು ನೋಡಿ) ಪ್ರಿಯೇ! ನಾನು ಆ ನ್ಯಾಯವಾದಿಗೆ ಕೊಟ್ಟ ಉಂಗುರವೇ ಇದೆಂದು ಖಂಡಿತವಾಗಿ ಹೇಳಬಲ್ಲೆನು! ಗುರುಪ್ರಸಾದ, ನಿನ್ನ ಉಂಗುರಕ್ಕೆ ನೀನು ಏನನ್ನುವಿ ?

**ಗುರು**:—(ನೋಡಿ) ಆರ್ಯಾ! ಈ ಉಂಗುರವು ನಾನು ಆ ನ್ಯಾಯವಾದಿಯ ವಿಲೇಖಕನಿಗೆ ಕೊಟ್ಟ ಉಂಗುರವೇ ಎಂದು ಎಂತಹ ಪ್ರಮಾಣ ಮಾಡಿಯಾದರೂ ಹೇಳುವೆನು !

**ವಸಂತ**:—ನಾನು ಇದನ್ನು ಕಂಡಾಕ್ಷಣವೇ ಗುರ್ತಿಸಿದೆನು.

**ಪ್ರಭಾ**:—ಹಾಗಿದ್ದರೆ ಇಂತಹ ಕುಶಲಮತಿಗಳಾದ ತಾವು ಆ ನ್ಯಾಯವಾದಿಯನ್ನು ಕಂಡಾಕ್ಷಣವೇ ಆತನನ್ನು ಹೇಗೆ ಗುರ್ತಿಸಲಿಲ್ಲ ?

**ವಸಂತ**:—ಪ್ರಿಯೇ, ಇದೇನಾಶ್ಚರ್ಯವು ! ಆ ನ್ಯಾಯವಾದಿಯು ನಿನ್ನ ಹೋಲಿಕೆಯಂತೆಯೇ ಇದ್ದನು ! ನೀನೇ ಅವನಾಗಿ ಬಂದೆಯೋ ಏನು ?

**ಗುರು**:—ಶಶಿಕಲೇ, ಆ ಕುಳ್ಳ ವಿಲೇಖಕನು ನಿನಗೇನಾದರೂ ಬಂಧುವು ಆಗಿರುವನೇನು ? ಹಾ ! ಈಗ ತಿಳಿಯಿತು ! ನೀನೇ ಅವನು !

**ಪ್ರಭಾ**:—ಪ್ರಾಣೇಶ್ವರಾ, ದೇವದೇವನಾದ ಆ ಜಗದ್ರಕ್ಷಕನು ಆವ ಮುಖದಿಂದಾಗಲಿ ಧರ್ಮೈಕಪರರನ್ನು ಸರಂಕ್ಷಿಸುವನು. ಕೊನೆಗೆ ಧರ್ಮವೇ ಜಯಿಸುವದು- ನ್ಯಾಯವಾದಿಯಾಗಲಿ, ನ್ಯಾಯಾಧಿಪತಿಯಾಗಲಿ ನಿಮಿತ್ತಮಾತ್ರರು. ಆ ಮಂಗಲಮಯನಾದ ಪರಮಾತ್ಮನೇ ನಮ್ಮಿರ್ವರಿಗೂ ಪ್ರೇರಣೆಯನ್ನಿತ್ತು ಈ ಪ್ರಕಾರ ಮಾಡಿಸಿದನು.

(ಸೇವಕನು ಬರುತ್ತಾನೆ)

**ಸೇವಕ**:—ಸ್ವಾಮೀ, ಶೂಲಕ್‌ಚಂದ ಮಾರವಾಡಿಯವರು ಬಂದಿದ್ದಾರೆ.

**ಅನಂತ** ಮತ್ತು **ವಸಂತ**:—ಓಹೋ ಒಳ್ಳೆಯ ಸಮಯಕ್ಕೆ ಬಂದರು ಎದುರುಗೊಳ್ಳಲು ನಾವೇ ಹೋಗುವ. [ಹೋಗಿ ಶೂಲಕ್‌ಚಂದನೊಡನೆ ಮತ್ತೆ ಬರುತ್ತಾ

**ಶಶಿಕಲೆ**:—ಅಪ್ಪಾ, ಅಪರಾಧಿನಿಯಾದ ಈ ಮಗಳನ್ನು ಕ್ಷಮಿಸಬೇಕು

[ನಮಸ್ಕರಿಸುತ್ತಾ

**ಗುರು**:— ಹಿರಿಯರೇ, ಅಪರಾಧಿಯಾದ ತಮ್ಮ ಈ ಅಳಿಯ ವಂದಿಸುತ್ತಾನೆ ಅನುಗ್ರಹಿಸಬೇಕು. [ನಮಸ್ಕರಿಸುತ್ತಾ

**ಶೂಲಕ್**:—ಉದಂಡಾಯುಷ್ಮಂತರಾಗಿರಿ! ಏಳಿರಿ, ಅಹಾ ! ಇಂದು ನಾನು ಧನ್ಯನು ! ಪ್ರಾರಂಭದಿಂದಲೂ ಪಾಪರತನಾದ ನಾನು ಇಂತಹ ಸುದಿನವನ್ನು ಕಂಡದ್ದು ನನ್ನ ಮಗಳ ಪುಣ್ಯವೆಂದೇ ಹೇಳಬೇಕು.

**ಅನಂತ**:—ಶೂಲಕ್ಷ್ಯಂದರೇ, ಒಂದು ವಿಶೇಷವು ತಮಗೆ ತಿಳಿದದೆ ಏನು?

**ಶೂಲಕ್**:—ಏನದು ? ಎನದು ?

**ಅನಂತ**— ನ್ಯಾಯಸಭೆಯಲ್ಲಿ ಬಂದ ನ್ಯಾಯವಾದಿಯನ್ನೂ, ಅವನ ವಿಲೇಖಕನನ್ನೂ ನೀವು ನೋಡಿದ್ದಿರಷ್ಟೇ ?

**ಶೂಲಕ್**:—( ಎದೆ ಬಡಿದುಕೊಂಡು ) ಹಾಯ್ ! ಹಾಯ್ ! ಕಠೋರಾ, ಶೂಲಕ್ಷ್ಯಂದಾ ! ಎಂತಹ ನೀಚನು ನೀನು ! ಸ್ವಾಮೀ ಅದರ ನೆನಪು ಮಾಡಬೇ ನಿಮ್ಮ ಕಾಲ್ಗೆರಗುತ್ತೇನೆ. ದಯಮಾಡಿ ಆ ಹೆಸರನ್ನೆತ್ತಬೇಡಿರಿ.

**ಅನಂತ**:—ಹಾಗಲ್ಲ! ಶೂಲಕ್ಷ್ಯಂದರೇ, ಮುಂದೆ ಕೇಳಿರಿ. ಆ ನ್ಯಾಯವಾದಿಯು ಮತ್ತಾರೂ ಅಲ್ಲ. ಈ ಪ್ರಭಾವತೀದೇವಿಯವರೇ ಪುರುಷವೇಷದಿಂದ ಬಂದು ಕಾರ್ಯಭಾರವನ್ನು ನೆರವೇರಿಸಿದರು.

**ಶೂಲಕ್**:—ಅಬ್ಬಬ್ಬ, ಹೀಗೇನು ?

**ಅನಂತ**:—ಮತ್ತು ನಿಮ್ಮ ಮಗಳಾದ ಶಶಿಕಲೆಯೇ ನ್ಯಾಯವಾದಿಯ ವಿಲೇಖಕನ ವೇಷದಿಂದ ಬಂದವಳು !

**ಶೂಲಕ್**:—ವಿಚಿತ್ರವು ! ಅತಿವಿಚಿತ್ರವು ! ಮಗಳೇ, ಬಾ, ನನ್ನನ್ನು ಇನ್ನೊಮ್ಮೆ ಆಲಿಂಗಿಸು. ಬೆದರಬೇಡ. ಈ ನಿನ್ನ ತಂದೆಯು ಮೊದಲಿನ ಶೂಲಕ್ಷ್ಯಂದನಲ್ಲವೆಂದೇ ತಿಳಿ. [ತಂದೆಯೂ, ಮಗಳೂ, ಪರಸ್ಪರ ಆಲಿಂಗಿಸುವರು.

( ಸೇವಕನು ಬರುತ್ತಾನೆ. )

**ಸೇವಕ**:—ದೇವಿಯವರಿಗೆ ವಂದಿಸುವೆನು. ಈ ಪತ್ರಿಕೆಯನ್ನು ಸೌರಾಷ್ಟ್ರಪುರದ ಕಾರ್ಯಭಾರಿಯು ಕಳುಹಿಸಿರುವನು.

**ಪ್ರಭಾ**:-(ಓದಿ) ಆರ್ಯ್ಯ,ಅನಂತಶ್ರೇಷ್ಠಿ, ಬಂದ ಅಂತರಾಯಗಳೆಲ್ಲವೂ ದೈವಾನುಗ್ರಹದಿಂದ ಪಟಾಪಂಚವಾಗುವವು, ನಿಮ್ಮ ಎಲ್ಲ ಹಡಗಗಳು ಸುರತ ಪಟ್ಟಣದ ಬಂದರವನ್ನು ಸುರಕ್ಷಿತವಾಗಿ ಸೇರಿರುವವೆಂದು ಕಾರ್ಯಭಾರಿಯು ಬರೆದಿರುವನು.

**ಅನಂತ**:-ಪ್ರಭಾವತೀದೇವೀ, ನಿನ್ನ ಬುದ್ಧಿಕೌಶಲ್ಯದಿಂದ ನನಗೆ ಪ್ರಾಣದಾನವನ್ನಿತ್ತಿದ ನೀನು, ನನ್ನ ಮುಂದಿನ ಜೀವಿತದ ಸುಖಸಾಧನೆಯನ್ನು ಸೂಚಿಸುವ ವಾರ್ತೆಯನ್ನೂ ಪೇಳಿ ನನ್ನನ್ನು ಸಂತೋಷಸಾಗರದಲ್ಲಿ ಮುಳುಗಿಸಿಬಿಟ್ಟೆ.

**ವಸಂತ:**—ಇದು ಸರ್ವರಿಗೂ ಸಂತೋಷಾಸ್ಪದವಾದ ವಾರ್ತೆಯು

**ಶೂಲಕ್:**—ಆನಂದ ! ಆನಂದ !! ಪರಮಾನಂದ !!! (ಕುಣಿಯುತ್ತ್ತ ವ

**ಪ್ರಭಾ:**—ಅನಂತಕಲ್ಯಾಣಗುಣಪರಿಪೂರ್ಣನಾದ ಆ ಪರಮಾ ಅನುಗ್ರಹದಿಂದ ಎಲ್ಲವೂ ಆನಂದಮಯವಾಗಿ ಪರಿಣಮಿಸಿತು ! ಆದವರಿಂದ ಮಂಗಲಸಮಯದಲ್ಲಿ ಆ ದಯಾನಿಧಿಯನ್ನು ಎಲ್ಲರೂ ಏಕಕಂಠವಾಗಿ ಮೃಷ್ಟಾನ್ನವನ್ನು ನೈವೇದ್ಯಗೈದು ನಾವೂ ಭುಂಜಿಸಲು ತೆರಳುವ.

**ಎಲ್ಲರೂ:**—ಹಾಡುತ್ತಾರೆ.

ರಾಗ, ಕಾಂಬೋಧಿ; ತಾಳ, ಝಂಪೆ.

ದೇವದೇವನೆಮೊಲಿದು ಸುಖವನೀಡೈ ।
ಪಾವನಾತ್ಮನೆಯೆಮ್ಮ ದುಃಖದೂಡೈ ॥ ಪಲ್ಲ ॥
ನಾಡಿನ ಹಿತವೆ ಜೀವನದ ಗುರಿಯಾಗಿರಲಿ ।
ನಾಡಿಗರೆಯೆಮ್ಮ ಮನೆಯಾಪ್ತರಾಗಿರಲಿ ॥
ನಾಡಿನ ನುಡಿಯೆಮ್ಮ ಗೃಹದೇವಿಯಾಗಿರಲಿ ।
ನಾಡೆಮ್ಮೆಲ್ಲರ್ಗೆ ಸರ್ವಸ್ವವಾಗಿರಲಿ ॥ ೧ ॥
ಪರಭಾಷೆ ಪರಧರ್ಮ ಮೊದಲಾದ ಪರಕೀಯ ।
ರುದುತರದ ಮೋಹವದು ಬಿಡದಳಿಯಲಿ ॥
ಅರಿವುಗೇಡಿತನದಾ ಪರಿಹರಿದು ಹೋಗಲಿ ।
ಅರಿವು ನಮ್ಮದು ನಮಗೆ ಚಿರಕಾಲವಿರಲಿ ॥ ೨ ॥
ಹಿಂದಿನ ಮಹಾತ್ಮರ ನೆನಪು ನಿತ್ಯ ನಮಗಿರಲಿ ।
ಅಂದಿನವರಾ ಗುಣಗಳೆಮ್ಮಲ್ಲಿ ಬರಲಿ ॥
ಹಿಂದೆ ಬಿದ್ದಿರುವೆಮ್ಮದುದ್ಧಾರವಾಗಲಿ ।
ವಂದಿಪೆವು ಸಕಲರಿಗೆ ಸಂತೋಷವಿರಲಿ ॥ ೩ ॥

ಸಂಪೂರ್ಣ.